# ಶ್ರೀಮದ್ವಾಲ್ಮೀಕಿ ರಾಮಾಯಣಮ್
## ಸುಂದರಕಾಂಡಃ

ಮೂಲ ಶ್ಲೋಕಗಳು, ಶ್ರೀಸತ್ಯಧರ್ಮತೀರ್ಥರ ಟಿಪ್ಪಣಿ ಸಹಿತ



ಶ್ರೀ ಸತ್ಯಧರ್ಮತೀರ್ಥರ ವೃಂದಾವನ
ಹೊಳೆಹೊನ್ನೂರು, ಶಿವಮೊಗ್ಗ ಜಿಲ್ಲೆ

ಶ್ರೀ ಸತ್ಯಧರ್ಮತೀರ್ಥ ಸೇವಾವೃಂದ
28, ರಂಗರಾವ್ ರಸ್ತೆ, ಶಂಕರಪುರಂ,
ಬೆಂಗಳೂರು-560 004

# ಶ್ರೀಮದ್ವಾಲ್ಮೀಕಿ ರಾಮಾಯಣಮ್
# ಸುಂದರಕಾಂಡಃ

ಮೂಲ ಶ್ಲೋಕಗಳು, ಶ್ರೀ ಸತ್ಯಧರ್ಮತೀರ್ಥರ ಟಿಪ್ಪಣಿ ಸಹಿತ


ಸಂಪಾದಕರು :

**ವಿದ್ವಾನ್ ಕೆ. ಹಯವದನ ಪುರಾಣಿಕರು,** M.A.

ಪ್ರಾಂಶುಪಾಲರು, ಶ್ರೀ ಪೂರ್ಣಪ್ರಜ್ಞ ವಿದ್ಯಾಪೀಠ (Retd.)

**ಬೆಂಗಳೂರು-560 028**



**ಶ್ರೀಸತ್ಯಧರ್ಮತೀರ್ಥ ಸೇವಾವೃಂದ**

28, ರಂಗರಾವ್ ರಸ್ತೆ, ಶಂಕರಪುರಂ, **ಬೆಂಗಳೂರು-560 004**

**SRIMADVALMIKI RAMAYANAM—SUNDARA KANDA :**
Together with the Tippani of **Sri Sathyadharmatheertha.**

First Edition : **1999**

Editor :
**Vidwan Hayavadana Puranik,** M.A.,
Principal, Sri Purna Prajna Vidyapeetha (Retd.)
**BANGALORE-560 028**

Publisher :
**N. Narayana Murthy**
Sanchalak
**Sri Sathyadharmatheertha Seva Vrunda**
28, Ranga Rao Road, Shankarapuram
**BANGALORE-560 004**

Price **Rs. : 70/-**

Printed at :
**Subodha Mudranalaya**
Chamarajapet, BANGALORE-18.

**Parimala Mudranalaya**
BANGALORE-560 019
Phone: 6525516

**Copies can be had at the residence of the Sanchalak**
OR at 116/A Mastivenkatesha Iyengar Street,
Gavipuram Extn., **BANGALORE-560 019.**

ದಿಗ್ವಿಜಯರಾಮೋ ವಿಜಯತೇ

# ಆಶೀರ್ವಚನ

ಪುರಾತನ ಇತಿಹಾಸವನ್ನೂ ಸನಾತನ ಧರ್ಮವನ್ನೂ ಸುಂದರವಾಗಿ ಸ್ವಾರಸ್ಯಕರವಾಗಿ ವರ್ಣಿಸಿರುವ ಬೋಧಿಸಿರುವ ಗ್ರಂಥರಾಜವೇ, ಆದಿಕವಿ ವಾಲ್ಮೀಕಿ ರಚಿತವಾದ **"ಶ್ರೀಮದ್ವಾಲ್ಮೀಕಿ ರಾಮಾಯಣ"**. ಈ ಗ್ರಂಥವನ್ನು ಎಲ್ಲಾ ವಿಚಾರವಂತರೂ ಸಾಹಿತಿಗಳೂ ವಿಮರ್ಶಕರೂ ಮುಕ್ತಕಂಠದಿಂದ ಹೊಗಳಿದ್ದಾರೆ. ಶ್ರೀ ಮನ್ನಾರಾಯಣ ಪಂಡಿತಾಚಾರ್ಯರು ತಮ್ಮ "ಸಂಗ್ರಹ ರಾಮಾಯಣ"ದಲ್ಲಿ ವಾಲ್ಮೀಕಿಗೌಃಪ್ರುನೀಯಾತ್ ಎಂದು ವರ್ಣಿಸಿದ್ದಾರೆ.

ಶ್ರೀಮದ್ರಾಮಾಯಣದಲ್ಲಿ ಅತಿ ಮಹತ್ವವೂ ಫಲದಾಯಕವೂ ಮನೋಹರವೂ ಆದ ಭಾಗವೇ 'ಸುಂದರಕಾಂಡ'. ಈ ಭಾಗವು ಸಾಮಾನ್ಯ ಜನರಿಗೆ ಸುಲಭವಾಗಿ ಅರ್ಥವಾಗುವಂತೆ ಪರಮ ದಯಾಳುಗಳೂ, ಜ್ಞಾನಿಗಳೂ, ತಪಸ್ವಿಗಳೂ, ವಿಖ್ಯಾತ ಗ್ರಂಥಕರ್ತರೂ ಆದ ಶ್ರೀ 1008 ಶ್ರೀಮದುತ್ತರಾದಿ ಮಠಾಧೀಶರಾಗಿದ್ದ ಶ್ರೀಸತ್ಯಧರ್ಮತೀರ್ಥ ಶ್ರೀಪಾದಂಗಳವರು ವಾಲ್ಮೀಕಿ ಋಷಿಗಳ ಅಭಿಪ್ರಾಯವನ್ನು ತಮ್ಮ ಸುಂದರ ಸರಳ ಶೈಲಿಯಲ್ಲಿ ತಮ್ಮ ವ್ಯಾಖ್ಯಾನ ಗ್ರಂಥದಲ್ಲಿ ಸ್ಪಷ್ಟಪಡಿಸಿದ್ದಾರೆ. ಇಂದಿನ ಸಾಧಕರಿಗೆ, ಈ ಎರಡು ಗ್ರಂಥಗಳು ಸುಲಭವಾಗಿ ಅರ್ಥವಾಗುವುದರಲ್ಲಿ, ಸಹಾಯಕವಾಗುವಂತೆ, ಪ್ರೀತ್ಯಾಸ್ಪದರಾದ ವಿದ್ವಾನ್ ಹಯವದನಪುರಾಣಿಕ್ ಕ್ಲಿಷ್ಟಕರ ಸಂಪಾದಕತ್ವದ ಜೊತೆಗೆ, ಈ ಎರಡೂ ಗ್ರಂಥಗಳ ಸಾರವನ್ನು ತಿಳಿಗನ್ನಡ ಭಾಷೆಯಲ್ಲಿ ತಮ್ಮ ವಿದ್ವತ್ಪೂರ್ಣ ಉಪೋದ್ಘಾತದಲ್ಲಿ ವಿವರಿಸಿ ಉಪಕಾರ ಮಾಡಿದ್ದಾರೆ.

ಮೊದಲ ಬಾರಿಗೆ ಕನ್ನಡದಲ್ಲಿ ಮುದ್ರಿತವಾಗುತ್ತಿರುವ ಈ ಗ್ರಂಥವನ್ನು ನಮ್ಮ ಪ್ರಿಯ ಶಿಷ್ಯರಾದ ನವರತ್ನ ನಾರಾಯಣ ಮೂರ್ತಿಯವರು, ಶ್ರೀಸತ್ಯಧರ್ಮತೀರ್ಥ ಸೇವಾವೃಂದದ ಪರವಾಗಿ, ಮುದ್ರಿಸಿ, ಪ್ರಕಟಿಸುತ್ತಿರುವುದು ನಮಗೆ ಬಹಳ ಸಂತೋಷವಾಗಿದೆ. ಸೇವಾವೃಂದದವರಿಗೂ, ಸಂಪಾದಕರಿಗೂ ಜ್ಞಾನ, ಭಕ್ತಿ, ವೈರಾಗ್ಯಗಳನ್ನು ಇತೋಪ್ಯತಿಶಯವಾಗಿ ಕೊಟ್ಟು, ಇವರಿಂದ ಇನ್ನು ಅನೇಕ ಗ್ರಂಥಗಳು ಹೊರಬರಲಿ ಎಂದು ನಮ್ಮ ಉಪಾಸ್ಯ ಮೂರ್ತಿ ಶ್ರೀ ಮೂಲರಾಮಚಂದ್ರದೇವರಲ್ಲಿ ಪ್ರಾರ್ಥಿಸುತ್ತೇನೆ.

ಇತಿ ನಾರಾಯಣ ಸ್ಮರಣೆಗಳು

**ಶ್ರೀ 1008 ಶ್ರೀಸತ್ಯಧರ್ಮತೀರ್ಥ ಶ್ರೀಚರಣರು**



# ಗುರುವರ್ಯರ ಆಶೀರ್ವಚನ

ಭಾರತೀಯ ಇತಿಹಾಸದಲ್ಲಿ ಅತ್ಯಂತ ಪ್ರಸಿದ್ಧವಾದ, ಪ್ರಮುಖವಾದ ಮಹಾನ್ ಗ್ರಂಥಗಳೆಂದರೆ ಸ್ವತಃ ಪರಮಾತ್ಮನೇ ವೇದವ್ಯಾಸರ ರೂಪದಿಂದ ಬರೆದ ಮಹಾಭಾರತ ಹಾಗೂ ಆದಿಕವಿ ವಾಲ್ಮೀಕಿ ಬರೆದ ಶ್ರೀಮದ್ರಾಮಾಯಣ. ರಾಮಾಯಣ ಅಂದಿನ ಚರಿತ್ರೆಯನ್ನು ತಿಳಿಸುವ ಮೂಲಕ ಇಂದಿನ ನಮ್ಮ ಜೀವನಕ್ಕೆ ಅತೀಹತ್ತಿರವಾಗಿದೆ. ಸುಂದರವಾದ ಈ ಗ್ರಂಥದಲ್ಲಿ "ಸುಂದರಕಾಂಡ" ಭಾಗವೂ ಅತಿಸುಂದರ.

ಈ ಸೌಂದರ್ಯವನ್ನು ಈ ನಮ್ಮ ಪೀಠದಲ್ಲಿ ಹಿಂದೆ ವಿರಾಜಮಾನರಾಗಿ ಅನೇಕ ಕೃತಿಗಳನ್ನು, ಸಂಪತ್ತುಗಳನ್ನು ಅನುಗ್ರಹಿಸಿದ ಶ್ರೀ ಸತ್ಯಧರ್ಮತೀರ್ಥರು ತಮ್ಮ ವ್ಯಾಖ್ಯಾನದಲ್ಲಿ ಸ್ಪಷ್ಟ ಮಾಡಿಕೊಟ್ಟಿದ್ದಾರೆ.

ಇದರ ಕನ್ನಡೀಕರಣವು ನಮಗೆ ಅತ್ಯಂತ ಪ್ರೀತ್ಯಾಸ್ಪದರಾದ, ವಿದ್ವಾಂಸರಾದ ಶ್ರೀ ಹಯವದನ ಪುರಾಣಿಕರು ಮಾಡುತ್ತಿದ್ದುದು ಕೇಳಿ ಬಹಳ ಸಂತೋಷವಾಗಿದೆ. ಇದರ ಮುದ್ರಣಕಾರ್ಯವನ್ನು ಶ್ರೀ ನವರತ್ನ ನಾರಾಯಣಮೂರ್ತಿಯವರು ಶ್ರೀಸತ್ಯಧರ್ಮತೀರ್ಥ ಸೇವಾವೃಂದದಿಂದ ನಡೆಸುತ್ತಿರುವುದು ಪ್ರಶಂಸನೀಯ ವಿಷಯ. ಇದರ ಸದುಪಯೋಗ ಎಲ್ಲ ಶ್ರೋತೃಗಳಿಗೂ ಅತ್ಯಾವಶ್ಯಕ.

ಅನುವಾದಕರಿಗೆ, ಮುದ್ರಕರಿಗೆ, ಓದುಗರಿಗೆ ಇತೋಪ್ಯತಿಶಯವಾದ ಜ್ಞಾನ-ಭಕ್ತಿ-ವೈರಾಗ್ಯಗಳನ್ನು ನೀಡಲೆಂದು ನಮ್ಮ ಉಪಾಸ್ಯ ಮೂರ್ತಿಯಾದ ಮೂಲ ರಾಮಚಂದ್ರಾಭಿನ್ನ ದಿಗ್ವಿಜಯರಾಮಚಂದ್ರ ದೇವರಲ್ಲಿ ಪ್ರಾರ್ಥಿಸುತ್ತೇವೆ.

ಇತಿ ನಾರಾಯಣ ಸ್ಮರಣೆಗಳು
ಶ್ರೀಸತ್ಯಾತ್ಮತೀರ್ಥ ಶ್ರೀಪಾದಂಗಳವರು
ಶ್ರೀಮದುತ್ತರಾಧಿಮಠ

# ಅರಿಕೆ

ಹತ್ತೊಂಬತ್ತನೆಯ ಶತಮಾನದ ಆದಿಯಲ್ಲಿ, ಶ್ರೀಮದುತ್ತರಾದಿಮಠದ ಸರ್ವಜ್ಞ ಪೀಠವನ್ನು ಅಲಂಕರಿಸಿದ್ದ ಶ್ರೀ ಸತ್ಯಧರ್ಮತೀರ್ಥರು, ಶ್ರೀಮದಾಚಾರ್ಯರು ಸ್ಥಾಪಿಸಿದ ಪೀಳಿಗೆಯಲ್ಲಿ ಇಪ್ಪತ್ತೇಳನೆಯ ಮಹಿಮಾವಂತರು. ಇವರ ಕಾಲ ಕ್ರಿ.ಶ. 1797-1830. ಈ ಮಹಾನುಭಾವರು ವೇದಾಂತ, ಸಾಹಿತ್ಯ ಹಾಗೂ ಇತಿಹಾಸಗಳಲ್ಲಿ ಉದ್ದಾಮಪಂಡಿತ ರಾಗಿದ್ದುದಲ್ಲದೆ, ಸ್ವತಃ ಆ ಪ್ರಾಕಾರಗಳಲ್ಲಿ ವಿದ್ವತ್ಪೂರ್ಣ ಕೃತಿಗಳನ್ನು ರಚಿಸಿ ಕೀರ್ತಿವಂತ ರಾಗಿದ್ದಾರೆ.

ಶ್ರೀಪಾದರ ಕೃತಿಗಳಲ್ಲಿ ಕೆಲವನ್ನಾದರು ಆಯ್ದು, ನುರಿತ ವಿದ್ವಾಂಸರಿಂದ ಕನ್ನಡಕ್ಕೆ ಅನುವಾದಿಸಿ, ಸುಲಭ ದರದಲ್ಲಿ ಜನಸಾಮಾನ್ಯರಲ್ಲಿ ಹಂಚಬೇಕೆಂಬ ಸದುದ್ದೇಶದಿಂದ, ಹದಿಮೂರು ವರ್ಷಗಳ ಹಿಂದೆ ಪ್ರಕಟನಾ ಕಾರ್ಯವನ್ನು ಸೇವಾವೃಂದವು ಕೈಗೊಂಡಿತು. ಇದುವರೆಗೆ ಶ್ರೀಪಾದರ ಪ್ರತಿಗಳನ್ನು ಆಧರಿಸಿ ಸೇವಾವೃಂದವು ಎಂಟು ಗ್ರಂಥಗಳನ್ನೂ, ಉಪಯುಕ್ತತೆ ದೃಷ್ಟಿಯಿಂದ ಆಯ್ದ ಕೆಲವು ಶ್ರೀಚರಣರ ಜೀವನಚರಿತ್ರೆಗಳನ್ನೂ ಪ್ರಕಟಿಸಿದೆ. ಈ ಸಾಧನೆಗೆ ಕಾರಣರಾದವರು ಮುಖ್ಯವಾಗಿ ಗ್ರಂಥಗಳನ್ನು ಅನುವಾದಿಸಿದ ವಿದ್ವಾಂಸರು, ದಾನಿಗಳು ಹಾಗೂ ಅಭಿಮಾನಿ ವಾಚಕವೃಂದ.

ಸುಂದರಕಾಂಡದ ಪ್ರಕಟನಾ ಕಾರ್ಯದಲ್ಲಿ ಹಲವು ಮಹನೀಯರು ವಿವಿಧ ರೀತಿಯಲ್ಲಿ ತಮ್ಮ ಸಹಕಾರ, ಸಹಾನುಭೂತಿ ಹಾಗೂ ಸಹಾಯವನ್ನು ನೀಡಿದ್ದಾರೆ. ಪರಮಪೂಜ್ಯ ಶ್ರೀಸತ್ಯಪ್ರಮೋದತೀರ್ಥ ಶ್ರೀಪಾದಂಗಳವರು ಈ ಸಾಹಸಕಾರ್ಯ ಕೈಗೊಂಡಿದ್ದಕ್ಕೆ ಅಭಿನಂದಿಸಿದ್ದಲ್ಲದೆ ಟಿಪ್ಪಣಿಯ ಪ್ರತಿಗಳನ್ನು ಪಡೆಯುವುದರಲ್ಲಿ ದಾರಿ ತೋರಿಸಿದ್ದಾರೆ. ಪ್ರೊ. ವ್ಯಾಸನಕೆರೆ ಪ್ರಭಂಜನಾಚಾರ್ಯರು ಹಾಗೂ ಮೈಸೂರಿನ ಪ್ರಾಚ್ಯವಿದ್ಯಾ ಸಂಶೋಧನಾ ಸಂಸ್ಥೆಯ ಅಧಿಕಾರಿಗಳು ಟಿಪ್ಪಣಿಯ ಪ್ರತಿಗಳನ್ನು ಸಕಾಲದಲ್ಲಿ ಒದಗಿಸಿ ಕೊಟ್ಟು ತಮ್ಮ ಸಹಕಾರ ನೀಡಿದ್ದಾರೆ. ಹಲವು ಸದಸ್ಯರು, ಉದಾರಹಸ್ತದಿಂದ, ಧನಸಹಾಯ ನೀಡಿದ್ದಾರೆ. ಈ ಗ್ರಂಥ ಸಂಪಾದನಾ ಕಾರ್ಯದಲ್ಲಿ ಎಷ್ಟು ಎಡರು ತೊಡರುಗಳು ಬಂದರೂ, ಅವನ್ನು ನಿವಾರಿಸಿಕೊಂಡು ತಾಳ್ಮೆಯಿಂದ ಕೈ ಹಿಡಿದ ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸಿದ ಸಂಪಾದಕರಿಗೂ ಹಾಗೂ ಅವರ ಕೆಲವು ನೆಚ್ಚಿನ ಶಿಷ್ಯರಿಗೂ ಸಂಘವು ಹೃತ್ಪೂರ್ವಕ ವಂದನೆಗಳನ್ನು ಕೃತಜ್ಞತಾಪೂರ್ವಕವಾಗಿ ಈ ಸಂದರ್ಭದಲ್ಲಿ ಅರ್ಪಿಸುತ್ತದೆ.

ಮುದ್ರಣಕಾರ್ಯವನ್ನು ಅಂದವಾಗಿ ಸಕಾಲದಲ್ಲಿ ಮಾಡಿಕೊಟ್ಟ ಸುಬೋಧ ಮುದ್ರಣಾಲಯದವರಿಗೂ, ಪರಿಮಳ ಮುದ್ರಣಾಲಯದವರಿಗೂ ಸೇವಾವೃಂದವು ಆಭಾರಿ ಯಾಗಿದೆ.

ನವರತ್ನ ನಾರಾಯಣಮೂರ್ತಿ

ಬೆಂಗಳೂರು-560 004 ಸಂಚಾಲಕ, ಶ್ರೀಸತ್ಯಧರ್ಮತೀರ್ಥ ಸೇವಾವೃಂದ

# ಉಪೋದ್ಘಾತ

**ರಾಮಾಯಣದ ಪ್ರಾಚೀನತೆ:**

ರಾಮಾಯಣ ಮಹಾಭಾರತಗಳು ನಮ್ಮ ಜನಾಂಗದ ಜೀವನವನ್ನು ಸಾವಿರಾರು ವರ್ಷಗಳಿಂದ ನಿರಂತರವಾಗಿ ಹಸನುಗೊಳಿಸುತ್ತ ಬಂದಿರುವ ಆರ್ಷಕಾವ್ಯಗಳು. ಜನ ಜೀವನದಲ್ಲಿ ಹಾಸುಹೊಕ್ಕಾಗಿ ಸೇರಿದ್ದು ಸುಸಂಸ್ಕೃತಿಯನ್ನು ರೂಪಿಸಿದ ಮಹಾ ಕಾವ್ಯ ಗಳು. ಈ ದೇಶದ ಎಲ್ಲೆಗಳನ್ನೂ ದಾಟಿ ಪರದೇಶಗಳಲ್ಲಿಯೂ ನಾನಾ ರೂಪಗಳನ್ನು ತಾಳಿ ಇಂದಿಗೂ ಚಿರನೂತನವಾಗಿದ್ದು ಹಚ್ಚ ಹಸುರಾಗಿ ಮೆರೆವ, ದಿವ್ಯಕೃತಿಗಳು. ಇಂಡೋನೇಷಿಯಾ, ಬಾಲಿ, ಜಾವಾ, ಇಂಡೋಚೀನ, ಸಯಾಮ, ಲಾವಾ, ಚೀನ, ಟಿಬೇಟ, ತುರ್ಕಿಸ್ತಾನ ಮುಂತಾದ ದೇಶಗಳಲ್ಲಿ ಆಯಾ ದೇಶ ಭಾಷೆಗಳ ಉಡುಪನ್ನು ತೊಟ್ಟು ಲಾಸ್ಯವಾಡುತ್ತಿದೆ. ರಾಮಾಯಣದ ಕಥೆ. ನೃತ್ಯನಾಟಕಗಳಲ್ಲಿ ಪ್ರೇಕ್ಷಕರ ಕಣ್ಮನಗಳನ್ನು ತಣಿಸುತ್ತಿದೆ.

ವೈದಿಕ ಸಾಹಿತ್ಯದಲ್ಲಿ ರಾಮ ಸೀತೆ ಜನಕ ದಶರಥ ನಾಮಗಳು ಕಂಡು ಬರುತ್ತವೆ. ಋಗ್ವೇದದಲ್ಲಿ ಸಂಕ್ಷಿಪ್ತ ರಾಮಾಯಣ ಹೀಗೆ ಬರುತ್ತದೆ:—

**ಭದ್ರೋ ಭದ್ರಯಾ ಸಚಮಾನ ಆಗಾತ್**
**ಸ್ವಸಾರಂ ಜಾರೋ ಅಭ್ಯೇತಿ ಪಶ್ಚಾತ್**
**ಸುಪ್ರಕೇತೈರ್ದ್ಯುಭಿರಗ್ನಿರ್ವಿತಿಷ್ಠಾದ್**
**ಉಶದ್ಭಿರ್ವರ್ಣೈರಭಿ ರಾಮಮಾರಾತ್ (ಋ. 10.3.3.)**

"ಶ್ರೀರಾಮ ಸೀತೆಯೊಡನೆ ಕಾಡಿಗೆ ಬಂದಾಗ ಸ್ತ್ರೀಲಂಪಟನಾದ ರಾವಣ ಕಪಟದಿಂದ ಬಂದು ಸೀತೆಯನ್ನು ಕದ್ದೊಯ್ದ. ಆಗ ಶ್ರೀರಾಮ ಅಗ್ನಿಯಂತೆ ಲಂಕೆಯ ಯುದ್ಧದಲ್ಲಿ ಉಜ್ವಲ ಪರಾಕ್ರಮ ತೋರಿ ನಿಂತು ರಾವಣನನ್ನು ಕೊಂದು ಸೀತೆಯನ್ನು ಅಗ್ನಿಪ್ರವೇಶ ಮಾಡಿಸಿದಾಗ ಅಗ್ನಿ ರಾಮನ ಮುಂದೆ ಪರಿಶುದ್ಧಳಾದ ಸೀತೆಯನ್ನು ತಂದಿತ್ತ."

ಪದಂ ಯದ್ವಿಷ್ಣೋರುಪಮಂ ನಿಧಾಯಿ
ತೇನ ಪಾಸಿ ಗುಹ್ಯಂ ನಾಮ ಗೋನಾಂ

'ಶಿವನೆ, ನೀನು ವಿಷ್ಣುವಿನ ಪಾದಕಮಲವನ್ನು ಹೃದಯದಲ್ಲಿ ಇರಿಸಿಕೊಂಡು

ಗೋಪ್ಯವಾದ ನಾಮವನ್ನು ನಾಲಿಗೆಯಲ್ಲಿ ಜತನ ಮಾಡಿಟ್ಟುಕೊಂಡಿರುವಿ.'— ಈ ಮಂತ್ರದಲ್ಲಿ ವಿಷ್ಣುವಿನ ಗುಣಗಾನವಿದೆ. ರಾಮನಾಮ ಕಂಡು ಬರುವುದಿಲ್ಲ, ನಿಜ. ಆದರೆ ಪದ್ಮಪುರಾಣದಲ್ಲಿ ಅದಕ್ಕೇ ವ್ಯಾಖ್ಯಾನ ರೂಪವಾಗಿ ಹೊರಟಂತಿರುವ ಒಂದು ಶ್ಲೋಕ ಹೀಗೆ ಹೇಳುತ್ತದೆ.

ಪಾಯಂ ಪಾಯಂ ಶ್ರುತಿ ಚುಲುಕಿತಂ ರಾಮನಾಮಾಮೃತಂ ಯತ್
ಧ್ಯಾಯಂ ಧ್ಯಾಯಂ ಮನಸಿ ಸತತಂ ಬ್ರಹ್ಮ ತತ್ ತಾರಕಾಖ್ಯಂ
ಜಾಪಂ ಜಾಪಂ ಪ್ರಕೃತಿವಿಕೃತೌ ಪ್ರಾಣಿನಾಂ ಕರ್ಣಮೂಲೇ
ವೀಥ್ಯಾಂ ವೀಥ್ಯಾಮಟತಿ ಜಟಿಲಃ ಕೋऽಪಿ ಕಾಶೀನಿವಾಸೀ ॥

'ಕಿವಿಗಳೆಂಬ ಬೊಗಸೆಗಳಿಂದ ಎತ್ತಿ ರಾಮನಾಮಾಮೃತರಸವನ್ನು ಕುಡಿಯುತ್ತ ಮನಸ್ಸಿನಲ್ಲಿ ತಾರಕ ಬ್ರಹ್ಮನೆನಿಸಿದ ಆ ರಾಮನನ್ನೆ ಸದಾ ಧ್ಯಾನಿಸುತ್ತ, ಜ್ಞಾನಿಗಳ ಪ್ರಾಣೋತ್ಕ್ರಮಣ ಕಾಲದಲ್ಲಿ ಕಿವಿಗಳಲ್ಲಿ ರಾಮಮಂತ್ರ ಉಸುರುತ್ತ ಕಾಶಿಯ ಬೀದಿ ಬೀದಿಗಳಲ್ಲಿ ಸುತ್ತುತ್ತಿರುತ್ತಾನೆ, 'ಜಟಾಧಾರಿ ಶಿವ.' ಇದರಿಂದ ಋಗ್ವೇದ ಹೇಳುವ ಗೋಪ್ಯವಾದ ನಾಮ ರಾಮನಾಮವೆ ಇರಬೇಕು.

ರಾಮತಾಪಿನೀ ಉಪನಿಷತ್ ಅಥವಾ ರಾಮೋಪನಿಷತ್ ಎಂದು ಉಪನಿಷತ್ತೇ ಇದೆ.

ಯಜುರ್ವೇದದ ಶತರುದ್ರೀಯ ಶತಕೋಟಿರಾಮಾಯಣಕ್ಕೆ ಮೂಲವೆನ್ನುವ ಅಭಿಪ್ರಾಯದಿಂದ ಶ್ರೀ ಸತ್ಯಧರ್ಮತೀರ್ಥರು ಅದಕ್ಕೆ ರಾಮಾಯಣ ಪರವಾಗಿ ಅಪೂರ್ವವ್ಯಾಖ್ಯೆ ರಚಿಸಿದ್ದಾರೆ.

### ರಾಮಕಥೆಯ ವಿಸ್ತಾರ

ಶ್ರೀಹರಿ ಹಯಗ್ರೀವರೂಪದಿಂದ ಸೃಷ್ಟಿಯ ಆದಿಕಾಲದಲ್ಲಿಯೆ ಚತುರ್ಮುಖ ಬ್ರಹ್ಮನಿಗೆ ಶತಕೋಟಿಗ್ರಂಥಾತ್ಮಕವಾದ ರಾಮಾಯಣವನ್ನು ಉಪದೇಶಿಸಿದನೆಂದು ಮತ್ಸ್ಯಪುರಾಣ ಹೇಳುತ್ತದೆ. ಒಂದು ಗ್ರಂಥವೆಂದರೆ ಮೂವತ್ತೆರಡು ಅಕ್ಷರಗಳು.

ಚರಿತಂ ರಘುನಾಥಸ್ಯ ಶತಕೋಟಿ ಪ್ರವಿಸ್ತರಂ ।
ಏಕೈಕಮಕ್ಷರಂ ಪ್ರೋಕ್ತಂ ಮಹಾಪಾತಕನಾಶನಂ ॥

ಅಂದಿನಿಂದ ಬ್ರಹ್ಮಲೋಕದಲ್ಲಿ ಪ್ರಚಲಿತವಾಗಿದ್ದ ಈ ಮೂಲ ರಾಮಾಯಣ ವನ್ನೇ ಅದು ಕಾಲ ಬಲದಿಂದ ಲುಪ್ತವಾದಾಗ ಹಯಗ್ರೀವಾವತಾರದಲ್ಲಿ ತಿರುಗಿ ರಚಿಸಿಕೊಟ್ಟ. ಅದನ್ನೆ ತ್ರೇತಾಯುಗದ ಕೊನೆಯಲ್ಲಿ ಅಂದರೆ ಇಂದಿಗೆ ಸುಮಾರು

ಹನ್ನೆರಡು ಲಕ್ಷ ವರ್ಷಗಳಷ್ಟು ಪೂರ್ವದಲ್ಲಿ ಭೂಲೋಕದಲ್ಲಿ ಶ್ರೀರಾಮಚಂದ್ರ ಹನುಮಂತನಿಗೆ ಉಪದೇಶಿಸಿದ—

**ಋತಸ್ಯ ಧೇನಾ ಅನಯಂತ ಸಸ್ರುತಃ ।—ಬಳಿತ್ಥಾ ಸೂಕ್ತ**

'ಶ್ರೀರಾಮನ ಮುಖದಿಂದ ಹರಿದು ಬಂದ ಅಮೃತರಸಮಯವಾದ ರಾಮಾಯಣ ಕಾವ್ಯಧಾರೆಯನ್ನು ಹನುಮಂತ ಲೋಕದಲ್ಲಿ ಹರಿಸಿದ.' ಇಲ್ಲಿ 'ಧೇನಾಃ' ಎಂದು ಬಹುವಚನ ಅರ್ಥಗರ್ಭಿತವಾಗಿದ್ದು ರಾಮಾಯಣ ಶತಕೋಟಿ ವಿಸ್ತರ ಎಂದು ಸೂಚಿಸುತ್ತದೆ.

ಋಗ್ವೇದ ಯಜುರ್ವೇದಗಳಲ್ಲಿ ಮಾತ್ರವಲ್ಲದೆ ಅಥರ್ವವೇದದಲ್ಲಿಯೂ ರಾಮಾಯಣವಿದೆ. ಸೀತೆ ಅಲ್ಲಿ ಕೃಷಿಯ ಅಧಿಷ್ಠಾತ್ರಿದೇವಿ. ಗೃಹ್ಯಸೂತ್ರದಲ್ಲಿ 'ಸೀತೆ' ಭೂಮಿಯನ್ನು ಉಳುವುದಕ್ಕೆ ಹೆಸರು. ಮುಂದೆ ನೇಗಿಲ ತುದಿಗೆ ಈ ಹೆಸರು ಪ್ರಚಲಿತವಾಯಿತು. ನೇಗಿಲ ತುದಿಯಿಂದ ಉತ್ತ ನೆಲದಲ್ಲಿ ಸೀತೆಯ ಅವತಾರವೂ ಆಯಿತು.

ಹೀಗೆ ಮೂಲ ರಾಮಾಯಣ ಮೂಲ ರೂಪದಲ್ಲಿ ಬ್ರಹ್ಮಲೋಕದಲ್ಲಿ ಪ್ರಸಿದ್ಧವಾಗಿದ್ದು ವೈದಿಕ ಸಾಹಿತ್ಯದ ಮೂಲಕ ಲೋಕಗಳಲ್ಲಿ ಪ್ರಚಲಿತವೆ ಆಗಿದ್ದರೂ ಹನುಮಂತನಿಂದ ಪುನಃ ಪ್ರಚಾರವಾದರೂ ಬಹಳ ವಿಸ್ತೃತವಾಗಿದ್ದರಿಂದ ನಾರದರ ಆಜ್ಞೆಯಂತೆ ವಾಲ್ಮೀಕಿ ಇಪ್ಪತ್ತನಾಲ್ಕು ಸಾವಿರ ಶ್ಲೋಕಗಳಲ್ಲಿ ಅದನ್ನು ಸಂಗ್ರಹಿಸಿ ಕೊಟ್ಟ. ಇದು ವಾಲ್ಮೀಕಿ ರಾಮಾಯಣದಲ್ಲಿಯೆ ಸ್ಪಷ್ಟವಿದೆ. ಅಲ್ಲಿ ವಾಲ್ಮೀಕಿ ನಾರದರಿಂದ ಪೂರ್ತಿ ಮೂಲ ರಾಮಾಯಣ ಕಥೆಯನ್ನು ಶ್ರವಣ ಮಾಡಿ ಅದನ್ನು ಏಳುಕಾಂಡಗಳಲ್ಲಿ ಐನೂರು ಸರ್ಗಗಳಲ್ಲಿ ಇಪ್ಪತ್ತನಾಲ್ಕು ಸಾವಿರ ಶ್ಲೋಕಗಳಲ್ಲಿ ವರ್ಣಿಸಿದನೆಂದಿದೆ.

**ವಾಲ್ಮೀಕಿ ರಾಮಾಯಣದ ಪ್ರಾಮಾಣ್ಯ**

ಈ ವಾಲ್ಮೀಕಿ ರಾಮಾಯಣ ಸಕಲ ವೈದಿಕರಿಗೂ ಮಾನ್ಯವಾದ ಗ್ರಂಥ. ಶ್ರೀ ವಿಜಯೀಂದ್ರತೀರ್ಥರು ನ್ಯಾಯಮೌಕ್ತಿಕಮಾಲಾದ ಶೈವಸರ್ವಸ್ವ ಖಂಡನದಲ್ಲಿ—

**ವಾಲ್ಮೀಕಿಪ್ರೋಕ್ತೇ ಸರ್ವವೈದಿಕ ಪರಿಗೃಹೀತೇ ರಾಮಾಯಣೇ.... ॥**

ಎಂದು ಸ್ಪಷ್ಟ ಹೇಳಿದ್ದಾರೆ—

## ವಾಲ್ಮೀಕೇರ್ಗೌಃ ಪುನೀಯಾನ್ನಃ ।

'ವಾಲ್ಮೀಕಿ ವಚನ ನಮ್ಮನ್ನು ಪುನೀತರನ್ನಾಗಿಸಲಿ' ಎಂದು ಸಂಗ್ರಹ ರಾಮಾಯಣದಲ್ಲಿ ಶ್ರೀನಾರಾಯಣ ಪಂಡಿತಾಚಾರ್ಯರು ಹೇಳಿದ್ದಾರೆ. ವಾಲ್ಮೀಕಿ ರಾಮಾಯಣವೆ ಹೇಳುವಂತೆ ವಾಲ್ಮೀಕಿ ರಾಮಾಯಣ ಕಾಲದವ. ದಶರಥನ ಆಪ್ತಮಿತ್ರ. ಗರ್ಭಿಣಿ ಸೀತೆಯನ್ನು ತನ್ನಾಶ್ರಮದಲ್ಲಿರಿಸಿಕೊಂಡು ಲವಕುಶರ ಜನನದಿಂದಾರಂಭಿಸಿ ಅವರ ಲಾಲನೆ ಪೋಷಣೆ ಗೈದು ತನ್ನ ರಾಮಾಯಣವನ್ನು ಅವರಿಂದ ಹಾಡಿಸಿ ಸಾಕ್ಷಾತ್ ರಾಮನ ಮೆಚ್ಚುಗೆಯನ್ನು ಗಳಿಸಿಕೊಂಡ ಮಹಾತ್ಮ. ಅವನ ಕಾವ್ಯ ಆದಿಕಾವ್ಯ, ಅವನು ಆದಿಕವಿ ಎನ್ನುತ್ತಾರೆ.

## ರಾಮಾಯಣದ ಪ್ರಚಾರ

ಮುಂದೆ ಮಹಾಭಾರತದಲ್ಲಿಯೂ ರಾಮೋಪಾಖ್ಯಾನ ಬಂದಿತು. ಮಹಾಭಾರತಾಂತರ್ಗತವಾದ ವಿಷ್ಣು ಸಹಸ್ರನಾಮ ರಾಮನಾಮದ ವ್ಯಾಖ್ಯಾನವೆಂದು ಪದ್ಮಪುರಾಣದಲ್ಲಿ ಶಿವ ಪಾರ್ವತಿಗೆ ಹೇಳುತ್ತಾನೆ—

ಸಹಸ್ರನಾಮತಸ್ತುಲ್ಯಂ ರಾಮನಾಮ ವರಾನನೇ ॥

ಪದ್ಮ, ಭಾಗವತ, ವಿಷ್ಣು, ವಾಯು, ಗರುಡ, ಅಗ್ನಿ, ಕೂರ್ಮ, ಲಿಂಗ, ಬ್ರಹ್ಮಾಂಡ, ಸ್ಕಂದ ಪುರಾಣಗಳಲ್ಲಿಯೂ ರಾಮಕಥೆ ಬರುತ್ತದೆ. ಇವಲ್ಲದೆ ಅಧ್ಯಾತ್ಮ ರಾಮಾಯಣ, ಆನಂದ ರಾಮಾಯಣ, ವಾಸಿಷ್ಠ ರಾಮಾಯಣ. ಶೇಷರಾಮಾಯಣ, ಅದ್ಭುತ ರಾಮಾಯಣ ಮುಂತಾದುವು ಸ್ವತಂತ್ರವಾಗಿ ಬಂದುವು. ಹಿಂದಿಭಾಷೆಯಲ್ಲಿ ರಾಮಚರಿತ ಮಾನಸ, ತಮಿಳಿನಲ್ಲಿ ಕಂಬರಾಮಾಯಣ, ಬಂಗಾಳಿಯಲ್ಲಿ ಕೃತ್ತಿವಾಸ ರಾಮಾಯಣ, ತೆಲುಗಿನಲ್ಲಿ ದ್ವಿಪದಿ ರಾಮಾಯಣ, ಮಲೆಯಾಳಧಲ್ಲಿ ರಾಮಚರಿತ, ಮರಾಠಿಯಲ್ಲಿ ಭಾವಾರ್ಥರಾಮಾಯಣ, ಉಡಿಯಾಽಲ್ಲಿ ಬಲರಾಮದಾಸ ರಾಮಾಯಣ, ಅಸ್ಸಾಮಿಯಲ್ಲಿ ಮಾಧವ ಕಂಲಿ ರಾಮಾಯಣಗಳು ಬಂದುವು.

ಕನ್ನಡದಲ್ಲಿ ಕುಮಾರ ವಾಲ್ಮೀಕಿಯ ತೊರವೆ ರಾಮಾಯಣ, ವೆಂಕಾಮಾತ್ಯನ ರಾಮಾಯಣ, ಕೌಶಿಕ ರಾಮಾಯಣ, ಮುದ್ದಣನ ಅದ್ಭುತ ರಾಮಾಯಣ, ರಾಮಾಶ್ವಮೇಧ, ರಾಮಪಟ್ಟಾಭಿಷೇಕಗಳು, ಕನಕದಾಸರ ರಾಮಧಾನ್ಯ ಚರಿತ್ರೆ, ತಿಪ್ಪಣಾಚಾರ್ಯನ ಹನುಮದ್ವಿಲಾಸ, ಕುವೆಂಪುವಿನ ರಾಮಾಯಣ ದರ್ಶನ ಮುಂತಾದುವು ಬಂದುವು.

ಮಧ್ವರಾಮಾಯಣ

ಈ ಎಲ್ಲ ರಾಮಾಯಣಗಳಲ್ಲಿ ಕಥೆ ಒಂದೇ ತೆರನಾಗಿಲ್ಲ. ಅನೇಕ ವ್ಯತ್ಯಾಸಗಳಾಗಿವೆ. ರಾಮಾಯಣವನ್ನಾಧರಿಸಿ ರಚಿತವಾದ ಕಾವ್ಯ ನಾಟಕಗಳಲ್ಲಿ ಕವಿಕಲ್ಪನೆಗನುಗುಣವಾಗಿ ಬಹಳ ವ್ಯತ್ಯಾಸಗಳೆ ಆಗಿವೆ. ಸಂಸ್ಕೃತದಲ್ಲಿ ಭಾಸ ಕಾಲಿದಾಸಾದಿ ಕವಿಗಳು ರಾಮಕಥೆಯನ್ನು ವಸ್ತುವಾಗಿಸಿಕೊಂಡು ಸುಮಾರು ಮೂವತ್ತಕ್ಕಿಂತಲೂ ಹೆಚ್ಚು ಕೃತಿಗಳನ್ನು ರಚಿಸಿದ್ದಾರೆ. ಕನ್ನಡದಲ್ಲಿ ಜೈನಪರಂಪರೆಯ ರಾಮಚಂದ್ರಚರಿತ ಪುರಾಣ, ಕುಮುದೇಂದು ರಾಮಾಯಣ, ಜಿನ ರಾಮಾಯಣ, ರಾಮ ವಿಜಯಕಾವ್ಯ, ರಾಮಕಥಾವತಾರ, ಚಾವುಂಡ ರಾಯ ಪುರಾಣ ಮುಂತಾದ ರಾಮಕಥೆಗಳಿವೆ. ಇವೆಲ್ಲವುಗಳಲ್ಲಿ ರಾಮಕಥೆ, ಬಹಳಷ್ಟು ಮಾರ್ಪಾಡು ಹೊಂದಿದೆ. ರಾವಣನಿಗೆ ಹತ್ತು ತಲೆ ಇರಲಿಲ್ಲ. ರಾವಣನನ್ನು ರಾಮ ಕೊಲ್ಲುವುದಿಲ್ಲ, ಲಕ್ಷ್ಮಣ ಕೊಲ್ಲುತ್ತಾನೆ. ಸೀತೆ ರಾವಣನ ಮಗಳು, ಅವಳಿಗೆ ಅಗ್ನಿಪರೀಕ್ಷೆ ಇಲ್ಲ, ಕೊನೆಗೆ ಜಿನ ದೀಕ್ಷೆ ಪಡೆಯುತ್ತಾಳೆ ಎಂದೆಲ್ಲ ವ್ಯತ್ಯಾಸಗಳಾಗಿವೆ. ಪಾಲಿಭಾಷೆಯ ಬೌದ್ಧಜಾತಕಗಳಲ್ಲಿಯೂ ರಾಮಕಥೆ ವ್ಯತಸ್ತವಾಗಿದೆ. ಯಕ್ಷಗಾನ ಬಯಲಾಟಗಳಲ್ಲಿ ಅಂಗದ ಸಂಧಾನ, ರಾಮಪಟ್ಟಾಭಿಷೇಕ, ಸೇತು ಬಂಧನ, ರಾವಣವಧೆ, ವಾಲಿ-ಸುಗ್ರೀವರ ಕಾಳಗ, ಸೀತಾ ಕಲ್ಯಾಣ ಮುಂತಾದ ಪ್ರಸಂಗಗಳ ಮೂಲಕ ರಾಮಕಥೆ ನಾನಾ ರೂಪ ತಾಳಿದೆ. ಕುಮಾರವ್ಯಾಸ ಹೇಳುತ್ತಾನೆ—

**ತಿಣುಕಿದನು ಫಣಿರಾಯ ರಾಮಾಯಣದ ಕವಿಗಳ ಭಾರದಲಿ**
**ತಂತಿಣಿಯ ರಘುವರ ಚರಿತೆಯಲಿ ಕಾಲಿಡಲು ತೆರಪಿಲ್ಲ ।**

ಈ ವ್ಯತ್ಯಾಸಗಳು ಪುರಾಣಗಳಲ್ಲಿ ಕಲ್ಪಾದಿ ಭೇದದಿಂದ ಬಂದಿರಬಹುದೆಂದು ಹೇಳುವಂತಿಲ್ಲ. ಏಕೆಂದರೆ,

**ಋತೇ ತು ಪಾಂಡವ ಕಥಾಂ ಕಾರ್ಷ್ಣಂ ರಾಮಾಯಣಂ ತಥಾ....**
**... ಕಲ್ಪಾದಿಭೇದತಃ ಕಥಾಭೇದಸ್ತು ವಿಜ್ಞೇಯಃ । (ಭಾಗ. ತಾ. 4.2.52)**

ಎಂದು ಭಾಗವತ ತಾತ್ಪರ್ಯದಲ್ಲಿ ಹೇಳಿದ ವಾರಾಹ ವಚನದಂತೆ ರಾಮಾಯಣ ಕಥೆಯಲ್ಲಿ ಕಲ್ಪಾದಿ ಭೇದದಿಂದ ವಿರೋಧ ಪರಿಹಾರ ಶಕ್ಯವಿಲ್ಲ. ಆದರಿಂದ ವಾಸ್ತವ ದಲ್ಲಿ ರಾಮಕಥೆ ಹೇಗಿತ್ತೆಂಬುದನ್ನು ಶ್ರೀಮಧ್ವಾಚಾರ್ಯರು ಮೂಲ ರಾಮಾಯಣ ದಿಂದಲೂ ಸ್ವತಃ ಹನುಮದವತಾರದಲ್ಲಿ ಪಡೆದ ಸ್ವಾನುಭವದಿಂದಲೂ ನಿರ್ಣಯಿಸಿ ಕೊಟ್ಟಿದ್ದಾರೆ, ಮಹಾಭಾರತ ತಾತ್ಪರ್ಯ ನಿರ್ಣಯದಲ್ಲೂ ಅದರಲ್ಲಿ ಮೂರರಿಂದ

ಒಂಬತ್ತನೇ ಅಧ್ಯಾಯದವರೆಗೆ ರಾಮಾಯಣನಿರ್ಣಯ ಬರುತ್ತದೆ. ಇದನ್ನು ಮಧ್ವರಾಮಾಯಣವೆನ್ನಬಹುದು.

ಇದರ ಮಾರ್ಗದರ್ಶನದಲ್ಲಿ ಶ್ರೀ ನಾರಾಯಣ ಪಂಡಿತಾಚಾರ್ಯರು ಸಂಗ್ರಹರಾಮಾಯಣವನ್ನು ಬರೆದಿದ್ದಾರೆ.

**ವಾಲ್ಮೀಕಿ ರಾಮಾಯಣ ಅಮರ ಕಾವ್ಯ**

ಎಲ್ಲ ಕವಿಗಳಿಗೂ ನಾಟಕಕಾರರಿಗೂ ಸ್ಫೂರ್ತಿಯ ಸೆಲೆ ಎನಿಸಿದುದು ಅಮರ ಕಾವ್ಯ ಕೃತಿಯಾದ ವಾಲ್ಮೀಕಿ ರಾಮಾಯಣ. ಅದೊಂದು ಹಸು. ಅದರ ಹಾಲುಂಡು ಪುಷ್ಟವಾದ ಕರುಗಳೆ ಎಲ್ಲ ಕವಿಗಳು ಎನ್ನುತ್ತಾರೆ ಪಂಡಿತಾಚಾರ್ಯರು—

**ಯದ್‌ದುಗ್ಧಮುಪಜೀವಂತಿ ಕವಯಸ್ತರ್ಣಕಾ ಇವ**

ಚಂಪು ರಾಮಾಯಣದಲ್ಲಿ ಭೋಜ ಹೇಳುತ್ತಾನೆ—

**ಮಧುಮಯ ಭಣಿತೀನಾಂ ಮಾರ್ಗದರ್ಶೀ ಮಹರ್ಷಿಃ ।**

'ಮಧುರ ಕಾವ್ಯ ರಚನೆಗೆಲ್ಲ ಮಾರ್ಗದರ್ಶಕನಾದ ಮಹರ್ಷಿಯೆ ವಾಲ್ಮೀಕಿ'. ವಾಲ್ಮೀಕಿ ತಾನೆ, ಎಲ್ಲ ಕಾವ್ಯ ನಾಟಕಗಳಿಗೂ ನಾಯಕನೆನಿಸುವ ಯಶೋಭಾಜನನಾದ ಪುರುಷ ಶ್ರೀರಾಮ ಎಂದಿದ್ದುಂಟು—

**ನ ಹ್ಯನ್ಯೋಽರ್ಹತಿ ಕಾವ್ಯಾನಾಂ ಯಶೋಭಾಗ್ ರಾಘವಾದೃತೇ**
**(ವಾ.ರಾ. ಉ. 98-18**

'ಭೂಮಿಯಲ್ಲಿ ಬೆಟ್ಟಗಳು ನದಿಗಳು ಇರುವಷ್ಟು ಕಾಲವೂ ರಾಮಾಯಣ ಕಥೆ ಎಲ್ಲ ಲೋಕಗಳಲ್ಲಿ ಪ್ರಚಾರದಲ್ಲಿರುತ್ತದೆ, ಎಂದು ರಾಮಾಯಣದಲ್ಲಿ ಬ್ರಹ್ಮ ವಾಲ್ಮೀಕಿಗೆ ವರ ನೀಡಿದುದರ ಉಲ್ಲೇಖವಿದೆ—

**ಯಾವತ್ ಸ್ಥಾಸ್ಯಂತಿ ಗಿರಯಃ ಸರಿತಶ್ಚ ಮಹೀತಲೇ ।**
**ತಾವದ್ ರಾಮಾಯಣಕಥಾ ಲೋಕೇಷು ಪ್ರಚರಿಷ್ಯತಿ ॥**

**ವಾಲ್ಮೀಕಿಯ ಜೀವನ**

ವಾಲ್ಮೀಕಿಯ ಜೀವನ ವೃತ್ತಾಂತದ ಬಗ್ಗೆ ರಾಮಾಯಣದಲ್ಲಿ ಇಷ್ಟು ಸಿಗುತ್ತದೆ—

'ಪ್ರಚೇತಸೋಽಹಂ ದಶಮಃ ಪುತ್ರೋ ರಾಘವನಂದನ । (ಉ. 96-19)

'ರಾಮ, ನಾನು ಪ್ರಚೇತಸನ ಹತ್ತನೆ ಮಗ'ಎಂದು ವಾಲ್ಮೀಕಿ ಹೇಳಿಕೊಳ್ಳುತ್ತಾನೆ. ಈ ಪ್ರಚೇತಸ ಯಾರು? ವರುಣನೆ? ಹಾಗೇ ಕೆವರು ಗ್ರಹಿಸಿದುದುಂಟು. ಆದರೆ ಸ್ಕಂದ ಪುರಾಣದಲ್ಲಿ ಹೆಚ್ಚಿನ ವಿವರಗಳು ಬಂದಿವೆ—

'ಭೃಗುವಂಶದ ಓರ್ವ ಜ್ಞಾನಿಯಾದ ಬ್ರಾಹ್ಮಣ. (ರಾಮಾಯಣ ಹೇಳುವಂತೆ ಪ್ರಚೇತಸ ಇವನೆ ಇರಬಹುದು.) ಈತನ ಮಗ ಅಗ್ನಿಶರ್ಮ. ಬಾಲ್ಯದಲ್ಲಿ ಈತ ವೇದಾಧ್ಯಯನವನ್ನು ಉಪೇಕ್ಷಿಸಿದ ಪರಿಣಾಮವಾಗಿ ಒಮ್ಮೆ ದೀರ್ಘಕಾಲದ ಅನಾವೃಷ್ಟಿಯಲ್ಲಿ ತಂದೆ ತಾಯಿ ಹೆಂಡತಿ ಮಕ್ಕಳೊಂದಿಗೆ ವನವಾಸ ಮಾಡುತ್ತಿದ್ದಾಗ ಬೇಡರ ಸಹವಾಸದಿಂದ ಹಿಂಸಾವೃತ್ತಿಗೆ ಇಳಿದ. ದರೋಡೆಗೂ ಪ್ರಾರಂಭಿಸಿದ.

ಒಮ್ಮೆ ಆ ದಾರಿಯಾಗಿ ತೀರ್ಥಯಾತ್ರೆ ಮಾಡುತ್ತಿದ್ದ ಸಪ್ತರ್ಷಿಗಳನ್ನೂ ಈತ ಬಿಡಲಿಲ್ಲ, ಅಡ್ಡಗಟ್ಟಿದ. ಅತ್ರಿಮುನಿ ಕೇಳಿದರು, 'ಅಯ್ಯ, ನೀನು ಮಾಡುವ ಈ ದುಷ್ಕರ್ಮಗಳ ಫಲವನ್ನು ನಿನ್ನೊಂದಿಗೆ ಉಣಲು ನಿನ್ನವರು ಯಾರಾದರೂ ಸಿದ್ಧರಿರುವರೆ, ಕೇಳಿ ನೋಡು.' ಆತ ಕುತೂಹಲಗೊಂಡು ಮನೆಯಲ್ಲಿ ವಿಚಾರಿಸಿದಾಗ ತಿಳಿಯಿತು, ಯಾರೂ ಸಿದ್ಧರಿಲ್ಲ ಎಂದು. ಆಗ ಪಶ್ಚಾತ್ತಾಪದಿಂದ ಓಡಿ ಬಂದು ಮುನಿಯ ಕಾಲಿಗೆ ಬಿದ್ದ. ಅವನಿಂದ ಒಂದು ಮಂತ್ರ ಉಪದೇಶ ಪಡೆದು ತಪಗೈದ. ಆಗ ಅವನ ಮೈಮೇಲೆ ಹುತ್ತ ಬೆಳೆಯಿತು. ಸಪ್ತರ್ಷಿಗಳೆ ಆ ದಾರಿಯಲ್ಲಿ ತಿರುಗಿ ಬಂದರು. ಹುತ್ತದೊಳಗಿದ್ದ ಅಗ್ನಿಶರ್ಮನನ್ನು ಎಬ್ಬಿಸಿದರು. 'ವಲ್ಮೀಕ'ದಿಂದ ಅಂದರೆ ಹುತ್ತದಿಂದ ಎದ್ದು ಬಂದನೆಂದು 'ವಾಲ್ಮೀಕಿ' ಎಂಬ ಹೊಸ ಹೆಸರಿಂದ ಕರೆದರು. ಶಿವನನ್ನಾರಾಧಿಸಲು ಉಪದೇಶಿಸಿದರು. ಅವನು ವಾಲ್ಮೀಕೇಶ್ವರನನ್ನು ಆರಾಧಿಸಿದ. ಕವಿತ್ವ ಸಿದ್ಧಿ ಹೊಂದಿ ರಾಮಾಯಣ ರಚಿಸಿದ.

### ವಾಲ್ಮೀಕಿ ಕನ್ನಡಿಗನೆ?

ಈ ಕಥೆ ಅಧ್ಯಾತ್ಮ ರಾಮಾಯಣದಲ್ಲಿಯೂ ಬರುತ್ತದೆ. ಅಲ್ಲಿ ಅತ್ರಿಮುನಿ. ಅಗ್ನಿಶರ್ಮನಿಗೆ ಉಪದೇಶಿಸಿದ ಮಂತ್ರ ಯಾವುದೆಂದೂ ಹೇಳಿದೆ. ಅದು ವ್ಯತ್ಯಸ್ತಾಕ್ಷರ ರಾಮಮಂತ್ರ, ಅಂದರೆ 'ಮರಾ' ಎಂದು—

ಏಕಾಗ್ರ ಮನಸಾತ್ರೈವ ಮರೇತಿ ಜಪ ಸರ್ವದಾ।

'ಮರ' ಎಂದರೆ ಸಂಸ್ಕೃತ ಭಾಷೆಯಲ್ಲಿ 'ಸತ್ತುಹೋಗು' ಎಂದರ್ಥ. ಅದು ಉಚ್ಚಾರಣೆಯಲ್ಲಿ ದೀರ್ಘವಾಗಿ 'ಮರಾ' ಎಂದಾಯಿತು. ಬೇಡನಾಗಿ ಪ್ರಾಣಿ ಹಿಂಸಾ

ನಿರತನಾಗಿದ್ದುದರಿಂದ ಈ ಶಬ್ದೋಚ್ಚಾರಣೆ ನಿರಾಯಾಸವಾಗಿ ನಾಲಿಗೆಯಲ್ಲಿ ಬರುವುದು ಶಕ್ಯವಿದ್ದಿತೆಂದೇ, ಮುನಿಗಳು ಅದನ್ನೇ ಉಪದೇಶಿಸಿದ್ದರು. ಆದರಿಂದ ಆತ 'ಮರಾ, ಮರಾ' ಎಂದು ಜಪಿಸುತ್ತಿದ್ದಂತೆ ಅದು ರಾಮ ಮಂತ್ರ ಜಪವಾಗಿ ಪರಿಣಮಿಸಿತು. ಮರ ಮರ ಎನ್ನುತ್ತ ರಾಕ್ಷಸರನ್ನು ಕೊಲ್ಲುವ ಶ್ರೀರಾಮನ ಅನುಗ್ರಹ ಲಭಿಸಿತು.

'ಮರ' ಎಂದರೆ ಕನ್ನಡ ತಮಿಳು ಮುಂತಾದ ಭಾಷೆಗಳಲ್ಲಿ ವೃಕ್ಷ ಎಂಬ ಅರ್ಥವಿರುವುದರಿಂದ ಆ ಅರ್ಥದಲ್ಲಿಯೆ ವಾಲ್ಮೀಕಿ ಮಂತ್ರಗ್ರಹಣ ಮಾಡಿದನೆಂದೂ ಆದರಿಂದ ಆತ ದಕ್ಷಿಣ ದೇಶದವ, ಪ್ರಾಯಶಃ ಕನ್ನಡಿಗನೆಂದೂ ಕೆಲವರು ನಂಬಿದ್ದುಂಟು. ಪುರಂದರ ದಾಸರು ತಮ್ಮ ಒಂದು ಕೀರ್ತನೆಯಲ್ಲಿ—

ಆ ಮರ ಈ ಮರ ಧ್ಯಾನಿಸುತ್ತಿರುವಾಗ
ರಾಮ ರಾಮ ಎಂಬ ನಾಮವೆ ಕಾಯ್ತೋ ।

ಎಂದು ಹೇಳಿರುವುದು ಇದಕ್ಕೆ ಪುಷ್ಟಿ ನೀಡುತ್ತದೆ. ಸಂಸ್ಕೃತದಲ್ಲಿ 'ಸತ್ತು ಹೋಗು' ಎನ್ನಲು ಸಾಮಾನ್ಯವಾಗಿ ಬಳಕೆಯಲ್ಲಿರುವ ಶಬ್ದ 'ಮ್ರಿಯಸ್ವ' ಎಂದು. ಮೃಧಾತುವಿನ ಕ್ರಿಯಾಪದ ರೂಪ ಮ್ರಿಯಸ್ವ ಎಂದಾಗುತ್ತದೆ. ಆದರೆ,

ರಾಜಪುತ್ರ ಚಿರಂ ಜೀವ ಮಾಜೀವ ಋಷಿ ಪುತ್ರಕ ।
ಜೀವ ವಾ ಮರ ವಾ ಸಾಧೋ ವ್ಯಾಧ ಮಾ ಜೀವ ಮಾ ಮರ ॥

'ರಾಜಕುಮಾರ, ನೀನು ಬಹುಕಾಲ ಬಾಳು,' (ಈ ಜನ್ಮದಲ್ಲಿ ಪೂರ್ವಕರ್ಮಾನು ಸಾರ ಒಳ್ಳೆಯ ಸುಖ ಪಡುತ್ತಿರುವೆ. ಜೊತೆಗೆ ಧರ್ಮಾಚರಣೆಯನ್ನೂ ಮಾಡುತ್ತಿರು ವುದರಿಂದ ಪರಲೋಕದಲ್ಲಿಯೂ ಸುಖ ನಿಶ್ಚಿತ. ಆದರಿಂದ ಚಿರಕಾಲ ಬಾಳು.)

'ಋಷಿ ಕುಮಾರ, ನೀನು ಬದುಕಿರಬೇಡ.' (ಈ ಜನ್ಮದಲ್ಲಿ ಬರಿ ತಪಸ್ಸು ಮಾಡುತ್ತಿ. ಒಂದಿಷ್ಟೂ ಸುಖವಿಲ್ಲ. ಬೇಗನೆ ಸತ್ತು ಪರಲೋಕದಲ್ಲಿಯಾದರೂ ಸುಖಪಡು.)

'ಸಾಧುವೆ, ನೀನು ಬದುಕಿರು ಅಥವಾ ಸತ್ತುಹೋಗು. ಎರಡರಲ್ಲಿಯೂ ಏನೂ ವಿಶೇಷವಿಲ್ಲ' (ಈ ಜನ್ಮದಲ್ಲಿ ಎಲ್ಲರಿಗೂ ಹಿತವನ್ನೆ ಬಯಸಿ ಎಲ್ಲರ ಪ್ರೀತಿ ಪಾತ್ರನಾಗಿ ನೆಮ್ಮದಿಯ ಸುಖದ ಬಾಳನ್ನು ನಡೆಸುವಿ. ಪುಣ್ಯಶಾಲಿಯಾಗಿದ್ದು ಪರಲೋಕದಲ್ಲಿಯೂ ಸುಖವನ್ನೆಪಡುವೆ.)

'ಬೇಡನೆ, ನೀನು ಬದುಕಲೂ ಬೇಡ ಸಾಯಲೂ ಬೇಡ' (ಪೂರ್ವಜನ್ಮದ ಪಾಪದಿಂದ ಬೇಡನಾಗಿ ಕಷ್ಟದ ಜೀವನ ನಡೆಸುತ್ತಿರುವಿ. ಆದರಿಂದ ಬದುಕಿ ಪ್ರಯೋಜನವಿಲ್ಲ. ಪರಲೋಕಸಾಧನೆಯನ್ನೂ ಮಾಡಿಕೊಳ್ಳುತ್ತಿಲ್ಲ. ಆದರಿಂದ ಸತ್ತರೂ ಸುಖವಿಲ್ಲ.'

ಈ ಸುಭಾಷಿತದಲ್ಲಿ ಸತ್ತು ಹೋಗೆನ್ನುವ ಅರ್ಥದಲ್ಲಿ 'ಮರ' ಎಂದೇ ಅನೇಕ ಬಾರಿ ಶಬ್ದ ಪ್ರಯೋಗವಿದೆ. ಆದರಿಂದ 'ಮರ' ಎಂಬ ಧಾತುವನ್ನು ಭ್ವಾದಿ ಗಣದಲ್ಲಿಟ್ಟುಕೊಂಡು 'ಮರ' ಶಬ್ದ ನಿಷ್ಪತ್ತಿ ಮಾಡಿಕೊಳ್ಳಬೇಕು. ಭ್ವಾದಿ ಆಕೃತಿ ಗಣ. ಗಣ ಪಾಠವೂ ಬಾಹುಲಕವೆನ್ನುತ್ತಾರೆ ವೈಯಾಕರಣರು. ಅಂತೂ 'ಮರ' ಶಬ್ದ ಸಂಸ್ಕೃತ ಭಾಷೆಯ ಒಂದು ಸಾಧು ಶಬ್ದವೆ ಆಗಿರುವುದರಿಂದ ಬೇರೆ ಭಾಷೆಯಲ್ಲಿ ಆ ಶಬ್ದವನ್ನು ನಿಷ್ಪಾದಿಸಬೇಕಾಗಿಲ್ಲ.

ವಾಲ್ಮೀಕಿಯ ಆಶ್ರಮ ಗಂಗಾತೀರದಲ್ಲಿತ್ತೆಂದೂ ಅಲ್ಲಿಗೆ ಗರ್ಭಿಣಿಯಾದ ಸೀತೆಯನ್ನು ರಾಮ ಕಳಿಸಿದನೆಂದೂ ರಾಮಾಯಣವೆ ಹೇಳುವುದರಿಂದ ಅವನು ದಕ್ಷಿಣ ದೇಶದವನಾಗಿರಲಿಕ್ಕಿಲ್ಲ.

ಪುರಂದರದಾಸರ ಕೀರ್ತನೆಯಲ್ಲಿಯೂ 'ಆ:! ಮರ' 'ಈ! ಮರ' ಎಂದು ಸದಾ ಹೇಳುತ್ತಿದ್ದ ಬೇಡನಿಗೆ ಹಾಗೇ ಜಪಿಸಲು ಉಪದೇಶಿಸಿದ್ದರು. 'ಆ:' 'ಈ' ಎಂಬ ಅವ್ಯಯಗಳು ಕ್ರೋಧವನ್ನು ವ್ಯಕ್ತ ಮಾಡುತ್ತವೆ. ಆದರಿಂದ ಅವೂ ಕನ್ನಡವೇ ಆಗ ಬೇಕಾಗಿಲ್ಲ.

**ವಾಲ್ಮೀಕಿಯ ಕುಲ:**

'ವಾಲ್ಮೀಕಿ ಬೇಡರ ಕುಲದಲ್ಲಿ ಹುಟ್ಟಿದವ. ಕಳ್ಳರ ಸಹವಾಸಕ್ಕೆ ಬಿದ್ದು ದಾರಿ ಹೋಕರನ್ನು ಹಿಡಿದು ಬಡಿದು ಸುಲಿಗೆ ಮಾಡಿ ಹೊಟ್ಟೆಹೊರೆದು ಕೊಳ್ಳುತ್ತಿದ್ದ. ಒಂದು ದಿನ ನಾರದರು ಅವನ ಕೈಗೆ ಸಿಕ್ಕಿಬಿದ್ದಾಗ ಅವರು ಕನಿಕರದಿಂದ ಅವನ ಪಾಪಗಳನ್ನು ಅವನ ತಿಳಿವಳಿಕೆಗೆ ತಂದುಕೊಟ್ಟರು. ಪಶ್ಚಾತ್ತಾಪ ಉಂಟು ಮಾಡಿದರು. ಒಂದು ಮರವನ್ನು ತೋರಿಸಿ ಇದನ್ನು ನಂಬಿ ಜಪಿಸು ಎಂದು ಉಪದೇಶಿಸಿದರು. ಅವನು ಮರಾ ಮರಾ ಎಂದು ಜಪಿಸುತ್ತ ರಾಮ-ರಾಮ ಎನ್ನತೊಡಗಿದ. ಆದರಿಂದ ರಾಮ ಪ್ರತ್ಯಕ್ಷನಾದ. ಬಳಿಕ ಆತ ರಾಮಾಯಣ ಬರೆದ. ವಾಲ್ಮೀಕಿ ನಾರದರು ಮಾತಾಡಿದ್ದು ಯಾವ ಭಾಷೆಯಲ್ಲಿ? ಸಂಸ್ಕೃತದಲ್ಲಾದರೆ ಆ ಭಾಷೆಯಲ್ಲಿ ವೃಕ್ಷಕ್ಕೆ ಮರ ಎಂಬ ಪರ್ಯಾಯ ಪದವಿಲ್ಲ. ಅದು ಕನ್ನಡದಲ್ಲಿ ಇದೆ, ತಮಿಳಿನಲ್ಲಿ ಇದೆ.

ತೆಲುಗಿನಲ್ಲಿ ಇಲ್ಲ. ಹಿಂದಿಯಲ್ಲಿಯೂ ಇಲ್ಲ. ವಾಲ್ಮೀಕಿ ನಾರದರು ಕನ್ನಡಿಗರೊ, ತಮಿಳರೊ? ಕಥೆಯನ್ನು ಕಥೆ ಎಂದುಕೊಂಡು ಅಲ್ಲಿಗೆ ಬಿಡಬಹುದು.'

—ಹೀಗೆ ವಿಮರ್ಶಕರು 'ಕಥೆ' ಹೇಳಿ ಕಥೆ ಎಂದು ಕೊಂಡು ಅಲ್ಲಿಗೆ ಬಿಡುತ್ತಾರೆ! ಮೇಲೆ ಹೇಳಿದ ಸ್ಕಂದಪುರಾಣ ಆಧ್ಯಾತ್ಮ ರಾಮಾಯಣ ವಚನಗಳನ್ನು ಕಂಡರೆ ನಾವೂ ಅದನ್ನು ಬಿಟ್ಟುಬಿಡುತ್ತೇವೆ. ವಾಲ್ಮೀಕಿ ಹುಟ್ಟಿದ್ದು ಬ್ರಾಹ್ಮಣನಾಗಿ, ಬದುಕಿದ್ದು ಬೇಡನಾಗಿ. ಜಪಿಸಿದ್ದು ಸಂಸ್ಕೃತದ 'ಮರ'ವನ್ನು! ಆಗಿನ ಕಾಲದಲ್ಲಿ ಸಂಸ್ಕೃತ ಆಡುಭಾಷೆಯಾಗಿತ್ತು!

**ಮಾ ನಿಷಾದ**

ತಮಸಾ ನದೀತೀರದಲ್ಲಿ ಒಂದು ಮರದಲ್ಲಿ ಕ್ರೌಂಚ ಪಕ್ಷಿಗಳ ಜೋಡಿ ನಲಿಯುತ್ತಿತ್ತು. 'ಚಾರು ನಿಸ್ವನ'ವಾಗಿದ್ದ ಆ ಜೋಡಿಯಲ್ಲಿ ಗಂಡು ಹಕ್ಕಿಯನ್ನು 'ವೈರ ನಿಲಯ'ನಾದ ಒಬ್ಬ ಬೇಡ ಹೊಡೆದು ಕೊಲ್ಲುತ್ತಾನೆ. ಅದು ನೆಲದಲ್ಲಿ ಬಿದ್ದು ನೋವಿಂದ ಹೊರಳಾಡುತ್ತಿದೆ. ಹೆಣ್ಣು ಹಕ್ಕಿ ಮರದ ಮೇಲೆ ಕುಳಿತು ಆಕ್ರಂದನ ಮಾಡುತ್ತಿದೆ. ಹೃದಯವಿದ್ರಾವಕವಾದ ಈ ದೃಶ್ಯವನ್ನು ಕಂಡು ವಾಲ್ಮೀಕಿಯ ಕವಿಚೇತನ ಮರುಗಿ ಕರಗಿ ಉದ್ಗರಿಸುತ್ತದೆ—

**ಮಾ ನಿಷಾದ ಪ್ರತಿಷ್ಠಾಂ ತ್ವಮಗಮಃ ಶಾಶ್ವತೀಃ ಸಮಾಃ ।**
**ಯತ್ ಕ್ರೌಂಚಮಿಥುನಾದೇಕಮವಧೀಃ ಕಾಮಮೋಹಿತಂ ॥**

'ಓ ಬೇಡನೆ, ಜೋಡಿಯಾಗಿ ನಲಿಯುತ್ತ ಮೈಮರೆತಿದ್ದ ಹಕ್ಕಿಗಳಲ್ಲಿ ಒಂದನ್ನು ಕೊಂದ ನೀನು ಲೋಕದಲ್ಲಿ ಶಾಶ್ವತ ನೆಲೆ ಪಡೆಯದಿರು.'

ಇಲ್ಲಿ 'ವಿಮರ್ಶಕ'ರ, ಕುಚೇಷ್ಟೆಗಳು ಹಲವು! ಉದಾಹರಣೆಗೆ ಡಿ.ವಿ.ಜಿ. ವಾಣಿ–'ಬೇಡನನ್ನು ಕುರಿತು ಕವಿ ನುಡಿದನೆಂದು ಹೇಳಿರುವ ಶಾಪವಾಕ್ಯ ವಾಲ್ಮೀಕಿಯ ಶೈಲಿಯಲ್ಲಿ ಇಲ್ಲ. ರತಿಭಂಗ ದೃಶ್ಯದಿಂದ ಸಹೃದಯರಲ್ಲಿ ಮರುಕ ಹುಟ್ಟುವುದು ಸ್ವಾಭಾವಿಕ. ಎಳೆ ಮಕ್ಕಳು ಆಟವಾಡಿಕೊಂಡು ನಲಿಯುತ್ತಿರುವಾಗ ಯಾರಾದರೂ ಹೊಡೆದರೆ ಎಂಥವರಿಗೂ ರೋಷವೇರುತ್ತದೆ. ಸನ್ನಿವೇಶ ಹೀಗೆ ಯುಕ್ತವೆ. ಆದರೆ ಜೋಡಿ ಹಕ್ಕಿಗಳಲ್ಲಿ ಒಂದನ್ನು ಮಾತ್ರ ಕೊಂದದ್ದು ಅಪರಾಧವೆ? ಎರಡನ್ನೂ ಒಟ್ಟಿಗೆ ಕೊಂದು ಹಾಕುತ್ತಿದ್ದರೆ ದುಃಖವಾಗುತ್ತಿರಲಿಲ್ಲವೆ? 'ನೀನು ಲೋಕದಲ್ಲಿ ನೆಲೆಯನ್ನು ಶಾಶ್ವತವಾಗಿ ಪಡೆಯದವನಾಗು!'– ಇದೆಂಥ ಶಾಪ? ನಿರಪಾಧಿಗಳಾದ ಜನಕ್ಕೆ ಮಾತ್ರ ಲೋಕವೇನು ಶಾಶ್ವತವೆ? ನೀನು ಶಾಶ್ವತವಾಗಿ ಬದುಕಬೇಡ

ಎಂಬುದರಲ್ಲಿ ಉದ್ವೇಗ ಉಂಟೆ? ಶಾಶ್ವತವಾದ ಬದುಕು ನನಗೂ ಬೇಡ, ಸ್ವಾಮಿ! ಇನ್ನೈವತ್ತು ವರ್ಷ ಸಾಕು ಎಂದು ಬೇಡನೆಂದಿದ್ದರೆ ವಾಲ್ಮೀಕಿಯ ಉತ್ತರವೇನು? ಸೀತಾರಾಮ ದಂಪತಿಗಳಲ್ಲಿ ಒಬ್ಬರನ್ನು ಅಪಹರಿಸಿದ ನೀನು ಬೇಗ ಮೃತ್ಯು ವಶನಾಗೆಂದು ವ್ಯಾಖ್ಯಾಂತರದಿಂದ ವಸ್ತುನಿರ್ದೇಶ ಮಾಡುವುದು ಪ್ರಯಾಸದಿಂದ ಕಲ್ಪಿಸಿದ ಅರ್ಥ. ಪ್ರತಿವಾದಿಗೆ ಬಾಯಿ ಮುಚ್ಚಿಸಬಹುದು. ಅಂತರಂಗದಲ್ಲಿ ಸಮಾಧಾನ ನೆಲೆಗೊಳಿಸಲಾರದು. ಈ ಶ್ಲೋಕವನ್ನು ವಿನಾಯಿಸಿದರೆ ಬಾಲಕಾಂಡದ ಈ ಸರ್ಗವಿಡೀ ಕವಿಯ ಸಹೃದಯತೆಗೆ ನಿದರ್ಶನ ಕೊಡಬಲ್ಲುದಾಗಿದೆ.'

ಆದರೆ ವಾಲ್ಮೀಕಿ ಮುಂದೆ ತಾನೇ ಮೇಲಿನ ಶ್ಲೋಕ ತನ್ನ ಬಾಯಿಂದ ಹೊರಬಿದ್ದುದಕ್ಕೆ ಆನಂದ ಆಶ್ಚರ್ಯಗಳನ್ನು ವ್ಯಕ್ತಪಡಿಸುತ್ತಾನೆ—

**ಕಿಮಿದಂ ವ್ಯಾಹೃತಂ ಮಯಾ!**

'ಎಂಥ ಮುತ್ತಿನಂಥ ಮಾತು ನನ್ನ ಬಾಯಿಂದ ಬಂದಿತು!'

ಈ ಒಂದು ಪುಟ್ಟ ಶ್ಲೋಕದಲ್ಲಿ ರಾಮಾಯಣಕಾವ್ಯಕ್ಕೇ ಮೂಲ ಸ್ಫೂರ್ತಿ ಅಡಕವಾಗಿತ್ತು. ಅದನ್ನೇ ವಿನಾಯಿಸಿ ಬಿಡಬೇಕೆ?

ದಿ। ಡಾ। ಪೋಲಂಕಿ ರಾಮಮೂರ್ತಿ ಅವರಿಗೆ ಈ ಶ್ಲೋಕ ಕ್ರೂರಿಯಾದ ರಾಮನು ಮುಂದೆ ಮಾಡುವ ರಾಕ್ಷಸಸಂಹಾರದ ಕ್ರೌರ್ಯಹಿಂಸೆಗಳ ಸೂಚಕವಾಗಿದ್ದು ಕಠೋರ ಅನ್ಯಾಯದ ಶಾಪವಾಕ್ಯವಾಗಿ ಕಂಡಿದೆ. ಹಕ್ಕಿಯನ್ನು ಕೊಂದ ಮಾತ್ರಕ್ಕೆ ತನ್ನ ಕುಲ ಕಸುಬಿನಲ್ಲಿದ್ದ ಬೇಡನೊಬ್ಬನಲ್ಲಿ ಕೋಪಗೊಳ್ಳುವುದು ವಾಲ್ಮೀಕಿಯಂಥ ಮುನಿಗೆ ಒಪ್ಪುವುದೆ? ಎನ್ನುತ್ತಾರೆ ಅವರು. 'ವಾಲ್ಮೀಕಿ ಬೇಡನಿಗೆ ಶಾಪವಿತ್ತು ಶಾಪದಿಂದಾಗಿ ತಪಃಶಕ್ತಿ ವ್ಯಯವಾದುದಕ್ಕೆ ದುಃಖಪಡುತ್ತ 'ಕಿಮಿದಂ ವ್ಯಾಹೃತಂ ಮಯಾ?' 'ತಪಃಶಕ್ತಿ ವ್ಯಯಮಾಡಿದೆ. ಈ ಹಾಳು ಶಾಪವಾಕ್ಯವನ್ನು ನಾನು ಏಕಾದರೂ ಹೇಳಿಬಿಟ್ಟೆನೊ ಎಂದು ಪರಿತಪಿಸುತ್ತಾನೆ' ಎನ್ನುತ್ತಾರೆ!

ವಸ್ತುತಃ 'ಮಾನಿಷಾದ' ಶಾಪವಾಕ್ಯವೆ ಅಲ್ಲ. 'ಮುನಿ' ವಾಲ್ಮೀಕಿ 'ಕವಿ'ಯಾದುದರ, ರಸ ದ್ರಷ್ಟಾರನಾದುದರ ಪ್ರಸಂಗವಿದು. 'ಭಾವಿತಾತ್ಮ' ಎಂದರೆ ಅಂತಃಕರಣದಲ್ಲಿ ಭಾವನಾ ವ್ಯಾಪಾರ ರಸಾನುಭವಕ್ಕೆ ಮೊದಲಿನ ಹಂತದ ಕವಿ ಹೃದಯದ ಸ್ಪಂದನ. ಕವಿಗೆ ಕಣ್ಣಮುಂದೆ ನಡೆದುಹೋದ ಒಂದು ಘಟನೆ ಹೃದಯವನ್ನು ಹೊಕ್ಕು ಕಲಕಿ ಭಾವನಾ ವ್ಯಾಪಾರ ಪ್ರಭಾವದಿಂದ ರಸಮಯವಾಗಿ ಮಾರ್ಪಟ್ಟು ಅಯತ್ನವಾಗಿ ಕಾವ್ಯರೂಪದಿಂದ ಹೊರಹೊಮ್ಮುತ್ತದೆ. ಆ ಗಾಢವಾದ

ರಸಾನುಭವಸ್ಥಿತಿಯಿಂದ ಎಚ್ಚತ್ತಾಗ ಕವಿ ತನ್ನ ಮಾತನ್ನೇ ಸಹೃದಯನಾಗಿ ಹೊಕ್ಕು ವಿಮರ್ಶಿಸಿ ತಾನೇ ಬೆರಗಾಗುತ್ತಾನೆ. 'ಕಿಮಿದಂ ವ್ಯಾಹೃತಂ ಮಯಾ!' 'ಎಂಥ ಸುಂದರ ರಸಾಭಿವ್ಯಕ್ತಿ ನನ್ನ ಈ ಮಾತು!' ಎಂದು ಉದ್ಗರಿಸುತ್ತಾನೆ. ವಾಲ್ಮೀಕಿಯೂ ಹಾಗೇ ತಾನು ಕಣ್ಣಾರೆ ಕಂಡು ಅರಿತಿದ್ದ ರಾಮಸೀತೆಯರ ಜೋಡಿಯ ಅಗಲಿಕೆಯನ್ನು ನಾರದರ ಮುಖದಿಂದಲೂ ಕೇಳಿದ ಮೇಲೆ ಅದಕ್ಕೆ ಸರಿಯಾದ ಪ್ರತೀಕ, ಸಂಕೇತವಾಗಿ ನಿಲ್ಲಬಲ್ಲ ಕ್ರೌಂಚಪಕ್ಷಿಗಳ ಜೋಡಿಯ ಘಟನೆಯನ್ನೂ ಕಂಡಾಗ ಅವನ ಕವಿ ಹೃದಯ ಎಚ್ಚತ್ತಿತ್ತು. ಆ ಹಕ್ಕಿಗಳಂತೆಯೆ 'ಚಾರುನಿಸ್ವನ'ರು ಮಧುರವಾದ ಬಾಳ ಸಂಗೀತ ಹಾಡುತ್ತಿದ್ದವರು ರಾಮ ಸೀತೆಯರು. ಅಯೋಧ್ಯೆಯ ದುಷ್ಟ 'ಸುರಾಣಕ' ಪ್ರಜಾಸಮೂಹ ಬೇಡನಂತೆ 'ವೈರ ನಿಲಯ'ವಾಗಿದ್ದು ಆ ಜೋಡಿಯನ್ನು ಅಗಲಿಸಿತು. ಹಕ್ಕಿಯನ್ನು ಕೊಂದುದು ಬೇಡನ ಕುಲಕಸುಬೆಂದು ಲಘುವಾಗಿ ಕಾಣುವಂತಿಲ್ಲ.

> ಮೃಗಮೀನ ಸಜ್ಜನಾನಾಂ ತೃಣಜಲ ಸಂತೋಷ ವಿಹಿತ ವೃತ್ತೀನಾಂ ।
> ಲುಬ್ಧಕಧೀವರ ಪಿಶುನಾ ನಿಷ್ಕಾರಣ ವೈರಿಣೋ ಜಗತಿ ॥ —ಭರ್ತೃಹರಿ.

'ಜಿಂಕೆ, ಮೀನು, ಸಜ್ಜನ ಈ ಮೂವರು ಹುಲ್ಲು, ನೀರು, ಸಿಕ್ಕಿದುದರಲ್ಲಿ ತೃಪ್ತಿಕಾಣುವುದು ಈ ಮೂರರಿಂದ ಬದುಕುವವರು. ಇವರಿಗೂ ವೈರಿಗಳಿದ್ದಾರೆ, ನಿಷ್ಕಾರಣ ವೈರಿಗಳು— ಬೇಡ ಬೆಸ್ತ ದುರ್ಜನ ಎಂದು'. ನಿರುಪದ್ರವಿಯಾದ, ನೋಡುವವರ ಕಣ್ಣಿಗೆ ತನ್ನ ಮೈಮಾಟದಿಂದ ಹಬ್ಬ ಉಂಟುಮಾಡುತ್ತ ಓಡಾಡುವ ಜಿಂಕೆಯನ್ನು ಹೊಡೆದು ಕೊಲ್ಲುವುದರಲ್ಲಿಯೆ ಆನಂದ ಪಡುತ್ತಾನೆ ಬೇಡ. ಹಾಗೇ ಅಯೋಧ್ಯೆಯ ಪ್ರಜಾಕೋಟಿ ತಮ್ಮ ಸುಂದರವಾದ ಬಾಳನ್ನೇ ಲೋಕಾರಾಧನೆಗಾಗಿ ಮುಡಿಪಿಟ್ಟಿದ್ದ ರಾಮಸೀತೆಯರಿಗೆ ರಾವಣನ ಬಳಿ ಇದ್ದ ಸೀತೆಯನ್ನು ರಾಮ ಸ್ವೀಕರಿಸಿದನೆಂಬ ಮರ್ಮವೇಧಕವಾದ ಮಾತಿನ ಬಾಣವೆಸೆಯಿತು. ಸುಳ್ಳು ಅಪವಾದ ಹಾಕುವುದು ದುರ್ಜನ ಸ್ವಭಾವ. ಈ ಬಾಣದ ಏಟಿಗೆ ರಾಮನೆಂಬ ಹಕ್ಕಿ ಕುಸಿದು ಬಿತ್ತು. ಹೆಣ್ಣು ಹಕ್ಕಿ ಸೀತೆಗೆ ಒಂದೆಡೆ ತನಗೆ ಪ್ರಿಯತಮನ ವಿಯೋಗದ ದುಃಖ, ಅದಕ್ಕಿಂತ ಮಿಗಿಲಾಗಿ ಪ್ರಿಯತಮ ಬಾಣದೇಟಿಗೆ ತುತ್ತಾಗಿ ಹೊರಳಾಡುವುದನ್ನು ನೆನೆನೆನೆದು ಸಹಿಸಲಾರದ ವೇದನೆ ಪಡುತ್ತಾಳೆ. ವಾಲ್ಮೀಕಿಗೆ ಕರುಳು ಕಿತ್ತು ಬರುವಷ್ಟು ದುಃಖವಾಗುತ್ತಿದೆ. ಆದರೂ ಬೇಡನಿಗೆ ಆತ ಶಾಪಕೊಡಲಿಲ್ಲ.

'ಅಯ್ಯ, ಬೇಡನೆ! ಇಂಥ ಕ್ರೂರಕರ್ಮ ಮಾಡಬೇಡ. ನಿಲ್ಲಿಸು. ನೀನೂ ಹೆಂಡತಿಯೊಡನೆ ಶಾಶ್ವತವಾಗಿ, ಅಂದರೆ ಬಹುಕಾಲ ಸುಖದಿಂದ ಇದ್ದವನೆ ತಾನೆ?

ಆ ಸುಖವನ್ನು ಉಂಡು ಅರಿತವ ನೀನು. ಯಾವ ಪ್ರಾಣಿ ಪಕ್ಷಿಗೂ ಆ ಸುಖವಿಲ್ಲದಂತೆ ಮಾಡಬೇಡ, ವೃದ್ಧನಾಗಿರುವಿ. ಇಂಥ ಕ್ರೂರ ಕರ್ಮ ಬಿಡು. ಜೊತೆಯಾಗಿ ನಲಿಯುತ್ತಿದ್ದ ಹಕ್ಕಿಗಳ ಜೋಡಿಯಲ್ಲಿ ಒಂದನ್ನು ಹೊಡೆದು ಕೊಂದೆಯಲ್ಲ!'— ಇದು ಮುನಿಯ ಕ್ರೂರಶಾಪವಲ್ಲ. ಹೃದಯದ ಕೋಮಲ ಶೋಕ. ರಾಮಾಯಣ ದಲ್ಲಿ 'ಶೋಕ'ವೆಂದಿದೆ ಹೊರತು ಎಲ್ಲಿಯೂ 'ಶಾಪ' ಎಂದಿಲ್ಲ.

'ಪ್ರತಿಷ್ಠಾಂ ಮಾ ಅಗಮಃ' 'ಬದುಕಿರಬೇಡ; ಸತ್ತೇಹೋಗು' ಎಂದರೆ ಶಾಪವಲ್ಲವೆ? ಅಲ್ಲ. 'ಮಾ' ಎಂಬ ಶಬ್ದದೊಂದಿಗೆ 'ಅಗಮಃ' ಶಬ್ದ ಸೇರಿಸುವ ವಿವಕ್ಷೆಯಲ್ಲಿ 'ಅಗಮಃ' ಎಂಬುದು 'ಗಮಃ' ಎಂದಾಗ ಬೇಕಾಗುತ್ತದೆ. ಈ ನಿಯಮವನ್ನು ತೊರೆದು 'ಛಾಂದಸ' ಎನ್ನುವುದು, ಶಾಪವೆಂದು ಗ್ರಹಿಸುವುದು ಕವಿಗೆ ಅನ್ಯಾಯವಾಗುವುದು. 'ಮಾ' ಎಂಬುದು ಪ್ರತ್ಯೇಕ ವಾಕ್ಯ. 'ಮಾಽಽಽಽ' ಎಂದು ನೆಲದಲ್ಲಿ ಹೊರಳಾಡುತ್ತಿರುವ ಗಂಡುಹಕ್ಕಿಯ ಬಗ್ಗೆ ಶೋಕ ವ್ಯಕ್ತಮಾಡುತ್ತಾನೆ, ಬೇಡನ ಬಗ್ಗೆ ಕನಿಕರದ ಮಮತೆಯ ಉಪದೇಶದ ಮನೋಭಾವ ತೋರುತ್ತಾನೆ.

ಒಂದು ವೇಳೆ ಶಾಪ ವಾಕ್ಯವೆಂದಿಟ್ಟುಕೊಂಡರೂ ಅದು ವಾಸ್ತವದಲ್ಲಿ ಬೇಡನಿಗೆ ಶಾಪವಲ್ಲ. 'ರೇರೇ ಚಾತಕ ಸಾವಧಾನ ಮನಸಾ ಮಿತ್ರಕ್ಷಣಂ ಶ್ರೂಯತಾಂ' ಎಲೆ ಚಾತಕ ಪಕ್ಷಿ, ಒಂದು ಕ್ಷಣ ನನ್ನ ಮಾತು ಕೇಳು. ಆಕಾಶದಲ್ಲಿ ಎಷ್ಟೋ ಮೋಡಗಳಿವೆ. ಆದರೆ ಎಲ್ಲ ಮೋಡಗಳೂ ಮಳೆಗರೆಯುವುದಿಲ್ಲ. ಎಲ್ಲೋ ಒಂದೆರಡು ಮಾತ್ರ. ಉಳಿದುವು ದೊಡ್ಡಶಬ್ದ ಮಾತ್ರ ಮಾಡುತ್ತವೆ. ನೀನು ಎಲ್ಲಮೋಡಗಳ ಮುಂದೆ ಮಳೆಯನ್ನು ಯಾಚಿಸಬೇಡ' ಎಂದು ಭರ್ತೃಹರಿ ಹೇಳಿದಾಗ ಚಾತಕಪಕ್ಷಿಗೆ ಉಪದೇಶ ನೀಡುತ್ತಾನೆ, ಮೋಡಗಳನ್ನು ಜರೆಯುತ್ತಾನೆ ಎಂದು ಗ್ರಹಿಸುವುದು ಆಭಾಸವಾಗು ತ್ತದೆ. ಇದು ದಾನ ಮಾಡದೆ ತಾವು ಉದಾರಿಗಳೆಂದು ಹೇಳಿಕೊಂಡುಬರುವ ಲೋಭಿ ಗಳಾದ ಶ್ರೀಮಂತರ ಬಗ್ಗೆ ಕವಿ ಮಾತೆನ್ನಬೇಕು. ಹಾಗೇ ವಾಲ್ಮೀಕಿಯ ಶಾಪ ಬೇಡನಿಗಲ್ಲ. ಸೀತಾರಾಮರ ವಿಯೋಗ ಮಾಡಿದವರಿಗೆ.

**ವಾಲ್ಮೀಕಿಯ ರಸಜ್ಞತೆ**

'ಮೊದಲ ಕವಿಯಾಗುವ ತನ್ನ ಮೆಚ್ಚಿನ ಕಂದನನ್ನು ವ್ಯಾಧನನ್ನಾಗಿ ಹುಟ್ಟಿಸುವಂತೆ ವಾಗ್ದೇವಿ ತನ್ನ ಪತಿಯನ್ನು ಪ್ರೇರಿಸಿದಳೆಂದು ತೋರುತ್ತದೆ. ವಾಲ್ಮೀಕಿಯ ಬಾಲ್ಯ ತಾರುಣ್ಯಕಾಲಗಳ ಅರಣ್ಯ ಪರಿಚಯದ ಪೂರ್ಣಫಲ ಅವನ ದಿವ್ಯ ಕೃತಿಯಲ್ಲಿ ಪ್ರತಿಫಲಿತವಾಗಿರುವುದನ್ನು ನಾವು ಕಾಣುತ್ತೇವೆ. ಮರಗಿಡ

ಬಳ್ಳಿಗಳು ಹೂ ಹಣ್ಣು ಹಕ್ಕಿಗಳು ಇವುಗಳ ಸೌಂದರ್ಯದಲ್ಲಿರುವ ಆವೇಶಪೂರ್ಣ ಆಸಕ್ತಿ ಅವುಗಳ ಒಂದೊಂದು ವಿವರದಲ್ಲಿಯೂ ನಿಕಟವಾದ ದೀರ್ಘವಾದ ಅನುಭವದಿಂದಲೆ ಒದಗುವ ರಸರುಚಿ ಋತುಋತುಗಳಲ್ಲಿ ವ್ಯತ್ಯಾಸ ಹೊಂದುವ ಪ್ರಕೃತಿ ಸೌಂದರ್ಯದ ವಿವರ ಜ್ಞಾನ ಇವು ವ್ಯಾಧವೃತ್ತಿಗಲ್ಲದೆ ಅಷ್ಟು ಆತ್ಮೀಯವಾಗಿ ಲಭಿಸುವುದು ಸುಲಭವಲ್ಲ. ಈ ರಸಜ್ಞತೆ ನಿಷಾದನಾಗಿ ಸಂಭವಿಸಿದ ಪುಣ್ಯದಿಂದಲ್ಲದೆ ಬೇರೆಯಲ್ಲ'— ಇದು ಕುವೆಂಪುವಿನ ನುಡಿ.

ಡಿವಿಜಿ ಹೇಳುವಂತೆ ಎಳೆ ಮಕ್ಕಳು ಆಟವಾಡಿಕೊಂಡು ನಲಿಯುತ್ತಿರುವಾಗ ಯಾರಾದರೂ ಹೊಡೆದರೆ ಎಂಥವರಿಗೂ ರೋಷವೇರುತ್ತದೆ ತಾನೆ! ಹಾಗಿದ್ದರೂ. ಮುದ್ದಾದ ಹಕ್ಕಿಗಳು ಪ್ರೀತಿಯಿಂದ ಜೋಡಿಯಾಗಿ ನಲಿಯುತ್ತಿರುವಾಗ ಒಂದನ್ನು ಕೊಲ್ಲುವವ, ಇನ್ನೊಂದರ ಕರುಣಾಜನಕವಾದ ಆಕ್ರಂದನ ಕೇಳಿಯೂ ಅದಕ್ಕೆ ಏನೂ ಸ್ಪಂದಿಸದ, ಹಿಂಸೆ ಕ್ರೌರ್ಯಗಳಲ್ಲಿಯೆ ಆನಂದ ಕಂಡುಕೊಳ್ಳುವ, ವಾಲ್ಮೀಕಿಯ ಭಾಷೆಯಲ್ಲಿ ಹೇಳಬೇಕೆಂದರೆ 'ವೈರನಿಲಯ'ನಾದ ಬೇಡ ಮಹಾ 'ರಸಜ್ಞ'ನೆನ್ನುವು ದಾದರೆ ಇನ್ನು ಯಾರು ರಸಜ್ಞನಲ್ಲ? ನಿಷಾದನಾಗಿ ಸಂಭವಿಸಿದ 'ಪುಣ್ಯ'ದಿಂದ ವಾಲ್ಮೀಕಿಗೆ ರಸರುಚಿ ಎಂದರೆ ಅರ್ಥಾತ್ ಹುಟ್ಟಿನಿಂದಲೆ ಬ್ರಾಹ್ಮಣನಾಗಿದ್ದರೆ ಋಷಿಯಾಗಿದ್ದರೆ ಈ ರಸಜ್ಞತೆ, ರಸರುಚಿ ಅಸಂಭಾವಿತವಾಗಿರುತ್ತಿತ್ತು ಎನ್ನುವ ಅಭಿಪ್ರಾಯವೆ?

ಪೂರ್ವಗ್ರಹವಿಲ್ಲದ ನಿರ್ಮಲ ದೃಷ್ಟಿಯಿಂದ ನೋಡಿದರೆ,

'ನಾನೃಷಿಃ ಕುರುತೇ ಕಾವ್ಯಂ'

'ಋಷಿಯಲ್ಲದವ ಕಾವ್ಯರಚಿಸಲಾರ' ಎನ್ನುವಂತೆ ಒಬ್ಬ ಋಷಿಯ ದೀರ್ಘ ತಪಸ್ಸಿನ ಪುಣ್ಯಫಲವೆ ರಾಮಾಯಣಕೃತಿ. ಪಾಪದಿಂದ ನಿಷಾದನಾಗಿ ಜನಿಸಿ ಹಿಂಸಾನಿರತನಾದ ಅಸಂಸ್ಕೃತ ವ್ಯಕ್ತಿಯೊಬ್ಬನ ಎದೆಯೊಳಗಿಂದ ರಾಮಾಯಣ ರಸಕಾರಂಜಿ ಪುಟಿದೇಳಬಹುದೆಂದು ನಿರೀಕ್ಷಿಸುವುದು ತಪ್ಪಾದೀತು.

ರಾಮಾಯಣ ನವಾಹ

ಸ್ಕಾಂದ ಪುರಾಣ ವಾಲ್ಮೀಕಿ ರಾಮಾಯಣವನ್ನು 'ಆದಿಕಾವ್ಯ'ವೆಂದುದು ಮಾತ್ರವಲ್ಲದೆ ಪಾರಾಯಣದಿಂದ, ಅಧ್ಯಯನದಿಂದ ಸಕಲಾಭೀಷ್ಟದಾಯಕವೆಂದೂ ಹೊಗಳಿದೆ:—

**ಸಂಕಲ್ಪಿತಾರ್ಥಪ್ರದಮಾದಿ ಕಾವ್ಯಂ ।**

ಸಪ್ತಾಹವಿಧಿಯಿಂದ ಭಾಗವತವನ್ನು ಕೇಳುವಂತೆ ನವಾಹ ವಿಧಿಯಿಂದ ರಾಮಾಯಣವನ್ನು ಕೇಳಲು ವಿಧಿಸಿದೆ—

**ನವಾಹ್ನಾ ಖಲು ಶ್ರೋತವ್ಯಂ ರಾಮಾಯಣ ಕಥಾಮೃತಂ।**

ಏಳೂ ಕಾಂಡಗಳನ್ನು ಪಾರಾಯಣ ಮಾಡುವುದು ಒಂದು ಕ್ರಮ. ಯುದ್ಧ ಕಾಂಡದವರೆಗೆ ಪಾರಾಯಣ ಇನ್ನೊಂದು ಕ್ರಮ.

ಮೊದಲನೆಯ ಕ್ರಮದಲ್ಲಿ—

1. ಅಯೋಧ್ಯಾಕಾಂಡ 6ನೇ ಸರ್ಗ ಸಮಾಪ್ತಿ ಪರ್ಯಂತ
2. ಅಯೋಧ್ಯಾಕಾಂಡ 80ನೇ ಸರ್ಗ ಸಮಾಪ್ತಿ ಪರ್ಯಂತ
3. ಅರಣ್ಯಕಾಂಡ 20ನೇ ಸರ್ಗ ಸಮಾಪ್ತಿ ಪರ್ಯಂತ
4. ಕಿಷ್ಕಿಂಧಾಕಾಂಡ 46ನೇ ಸರ್ಗ ಸಮಾಪ್ತಿ ಪರ್ಯಂತ
5. ಸುಂದರ ಕಾಂಡ 47ನೇ ಸರ್ಗ ಸಮಾಪ್ತಿ ಪರ್ಯಂತ
6. ಯುದ್ಧಕಾಂಡ 50ನೇ ಸರ್ಗ ಸಮಾಪ್ತಿ ಪರ್ಯಂತ
7. ಯುದ್ಧಕಾಂಡ 99ನೇ ಸರ್ಗ ಸಮಾಪ್ತಿ ಪರ್ಯಂತ
8. ಉತ್ತರಕಾಂಡ 36ನೇ ಸರ್ಗ ಸಮಾಪ್ತಿ ಪರ್ಯಂತ
9. ಉತ್ತರಕಾಂಡ 111ನೇ ಸರ್ಗ ಸಮಾಪ್ತಿ ಪರ್ಯಂತ

ಎರಡನೇ ಕ್ರಮದಲ್ಲಿ—

1. ಬಾಲಕಾಂಡ 77ನೇ ಸರ್ಗ ಸಮಾಪ್ತಿ ಪರ್ಯಂತ.
2. ಅಯೋಧ್ಯಾಕಾಂಡ 60ನೇ ಸರ್ಗ ಸಮಾಪ್ತಿ ಪರ್ಯಂತ
3. ಅಯೋಧ್ಯಾಕಾಂಡ 119ನೇ ಸರ್ಗ ಸಮಾಪ್ತಿ ಪರ್ಯಂತ
4. ಅರಣ್ಯಕಾಂಡ 68ನೇ ಸರ್ಗ ಸಮಾಪ್ತಿ ಪರ್ಯಂತ
5. ಕಿಷ್ಕಿಂಧಾಕಾಂಡ 49ನೇ ಸರ್ಗ ಸಮಾಪ್ತಿ ಪರ್ಯಂತ
6. ಸುಂದರಕಾಂಡ 56ನೇ ಸರ್ಗ ಸಮಾಪ್ತಿ ಪರ್ಯಂತ
7. ಯುದ್ಧಕಾಂಡ 50ನೇ ಸರ್ಗ ಸಮಾಪ್ತಿ ಪರ್ಯಂತ
8. ಯುದ್ಧಕಾಂಡ 50ನೇ ಸರ್ಗ ಸಮಾಪ್ತಿ ಪರ್ಯಂತ
9. ಯುದ್ಧಕಾಂಡ 131ನೇ ಸರ್ಗ ಸಮಾಪ್ತಿ ಪರ್ಯಂತ

ವಿಶೇಷವಾಗಿ ಚೈತ್ರ ಮಾಘ ಕಾರ್ತಿಕ ಮಾಸಗಳ ಶುಕ್ಲಪಕ್ಷಗಳಲ್ಲಿ ನವಾಹ ಮಹಾಪುಣ್ಯಕರವೆಂದಿದೆ—

**ಚೈತ್ರೇ ಮಾಘೇ ಕಾರ್ತಿಕೇ ಚ ಸಿತೇ ಪಕ್ಷೇ ಚ ವಾಚಯೇತ್ ।**
**ನವಾಹಂ ತು ಮಹಾಪುಣ್ಯಂ ಶ್ರೋತವ್ಯಂ ಚ ಪ್ರಯತ್ನತಃ ॥**

**ರಾಮಾಯಣ ಪಾರಾಯಣ ಫಲ:**

ಬಾಲಕಾಂಡ — ಅನಾವೃಷ್ಟಿ ಗ್ರಹಪೀಡೆಗಳ ಪರಿಹಾರಫಲ
ಅಯೋಧ್ಯಾಕಾಂಡ —ಪುತ್ರಜನ್ಮ ವಿವಾಹಾದಿ ಫಲ, ಗುರುದರ್ಶನ ಫಲ.
ಅರಣ್ಯಕಾಂಡ —ಅರಣ್ಯ–ರಾಜಗೃಹ–ವಹ್ನಿ–ಜಲಗಳಲ್ಲಿ ಪೀಡಾಪರಿಹಾರ ಫಲ.
ಕಿಷ್ಕಿಂಧಾ ಕಾಂಡ —ಮಿತ್ರಲಾಭ, ನಷ್ಟ ದ್ರವ್ಯಲಾಭ.
ಸುಂದರಕಾಂಡ —ಶತ್ರುಜಯ, ಉತ್ಸಾಹ (ಶ್ರಾದ್ಧ ಹಾಗೂ ದೇವತಾಕಾರ್ಯಗಳಲ್ಲಿ ವಿಶೇಷವಾಗಿ ಪಠಿಸಬೇಕಾದುದು)
ಯುದ್ಧಕಾಂಡ —ಶತ್ರುಜಯ, ಉತ್ಸಾಹ.

**ಸುಂದರಕಾಂಡ ಪಾರಾಯಣ ಕ್ರಮ**

ಸುಂದರಕಾಂಡ ಪಾರಾಯಣದಲ್ಲಿಯೂ ಎರಡು ಕ್ರಮಗಳಿವೆ. ಮೊದಲನೆ ಕ್ರಮದಲ್ಲಿ ಮೊದಲನೆ ದಿನ ಒಂದು ಸರ್ಗ ಮಾತ್ರ ಪಾರಾಯಣ. ಮುಂದೆ ಪ್ರತಿದಿನ ಒಂದೊಂದು ಅಧ್ಯಾಯ ಹೆಚ್ಚಿಸಬೇಕು. ಅಂದರೆ ಎರಡನೆ ದಿನ ಎರಡನೆ ಮೂರನೆ ಸರ್ಗಗಳು. ಮೂರನೆ ದಿನ ನಾಲ್ಕು ಐದು ಆರನೇ ಸರ್ಗಗಳು. ನಾಲ್ಕನೆ ದಿನ ಮುಂದಿನ ನಾಲ್ಕು ಸರ್ಗಗಳು. ಹೀಗೆ ಹನ್ನೊಂದನೆ ದಿನ ಅರವತ್ತಾರನೆ ಸರ್ಗದವರೆಗೆ ಹನ್ನೊಂದು ಸರ್ಗಗಳ ಪಾರಾಯಣ. ಹನ್ನೆರಡನೆ ದಿನ ಉಳಿದ ಎರಡು ಸರ್ಗಗಳ ಜೊತೆಗೆ ಆದಿಯ ಹತ್ತು ಸರ್ಗಗಳನ್ನೂ ಸೇರಿಸಿ ಒಟ್ಟು ಹನ್ನೆರಡು ಸರ್ಗಗಳನ್ನು ಪಾರಾಯಣ ಮಾಡಬೇಕು. ಹದಿಮೂರನೆ ದಿನ ಹನ್ನೊಂದನೆ ಸರ್ಗದಿಂದಾರಂಭಿಸಿ ಇಪ್ಪತ್ತಮೂರನೆ ಸರ್ಗದವರೆಗಿನ ಹದಿಮೂರು ಸರ್ಗಗಳು. ಹೀಗೇ ಮಾಡುತ್ತಾ ಇಡಿ ಸುಂದರಕಾಂಡವನ್ನು ಮೂರು ಬಾರಿ ಪಾರಾಯಣ ಮಾಡಿದರೆ ಸರ್ವಾಭೀಷ್ಟಸಿದ್ಧಿ.

ಎರಡನೇ ಕ್ರಮದಲ್ಲಿ ಪ್ರತಿದಿನ ಐದು ಸರ್ಗಗಳ ಪಾರಾಯಣ. ಹದಿಮೂರನೆ ದಿನ ಅರವತ್ತೈದನೆ ಸರ್ಗದವರೆಗೆ ಪಾರಾಯಣ ಮಾಡಿ ಹದಿನಾಲ್ಕನೆದಿನ ಉಳಿದ ಮೂರು ಸರ್ಗಗಳನ್ನು ಆದಿಯ ಎರಡು ಸರ್ಗಗಳನ್ನು ಪಾರಾಯಣ ಮಾಡಬೇಕು.

**ಸುಂದರಕಾಂಡ ಪುರಶ್ಚರಣೆ:**

ದಶಾಭುಕ್ತಿ ದೋಷಪರಿಹಾರಕ್ಕೆ ಸುಂದರಕಾಂಡದಿಂದ ಕೆಲವು ಸರ್ಗಗಳನ್ನು ಪುರಶ್ಚರಣ ಅಥವಾ ಪಾರಾಯಣ ಮಾಡುವುದು ವಿಹಿತವಾಗಿದೆ. ಚಂದ್ರದೆಶೆಯಲ್ಲಿ 5ನೇ ಸರ್ಗ. ಕುಜದಶಾ ಶುಕ್ರಭುಕ್ತಿಯಲ್ಲಿ 53ನೇ ಸರ್ಗ. ರಾಹುದಶಾ ಶನಿಭುಕ್ತಿಯಲ್ಲಿ 47ನೇ ಸರ್ಗ. ರಾಹುದಶಾ ಶುಕ್ರಭುಕ್ತಿಯಲ್ಲಿ 65ನೇ ಸರ್ಗ. ಗುರುದೆಶೆಯಲ್ಲಿ ಒಂದನೇ ಸರ್ಗ. ಗುರುದಶಾ ಕೇತುಭುಕ್ತಿಯಲ್ಲಿ 61 ಮತ್ತು 62ನೇ ಸರ್ಗಗಗಳು. ಶನಿದಶಾ ಶನಿಭುಕ್ತಿಯಲ್ಲಿ 48ನೇ ಸರ್ಗ, ಶನಿದಶಾಬುಧಭುಕ್ತಿಯಲ್ಲಿ 54ನೇ ಸರ್ಗ, ಬುಧೆದಶಾ ಕುಜಭುಕ್ತಿಯಲ್ಲಿ 27ನೇ ಸರ್ಗ. ಕೇತುದಶಾ ಶುಕ್ರಭುಕ್ತಿಯಲ್ಲಿ 65ನೇ ಸರ್ಗ, ಶುಕ್ರದಶೆಯಲ್ಲಿ 38ನೇ ಸರ್ಗ.

ಸುಂದರಕಾಂಡದ 3ನೇ ಸರ್ಗ ಪುರಶ್ಚರಣವನ್ನು 36 ದಿನ ಮಾಡಿದರೆ ಪಿಶಾಚಬಾಧಾನಿವೃತ್ತಿ. 13ನೇ ಸರ್ಗ 130 ದಿನ ಪುರಶ್ಚರಣದಿಂದ ಬುದ್ಧಿಸ್ಥೈರ್ಯ, 15ನೇ ಸರ್ಗ 75 ಅಥವಾ 150 ದಿನ ಪುರಶ್ಚರಣ ಮಾಡಿದರೆ ದಾರಿದ್ರ್ಯನಿವಾರಣೆ, 27ನೇ ಸರ್ಗ 27 ದಿನ ಪುರಶ್ಚರಣದಿಂದ ದುಃಸ್ವಪ್ನನಿವೃತ್ತಿ. 36ನೇ ಸರ್ಗ 36 ದಿನ ಪುರಶ್ಚರಣೆ ಮಾಡಿದರೆ ಕಾಣೆಯಾದವರ ಪತ್ತೆ. ನೈವೇದ್ಯಕ್ಕೆ ಕ್ರಮವಾಗಿ ಪಾಯಸ, ಉದ್ದಿನ ಭಕ್ಷ್ಯ, ಬಾಳೆಹಣ್ಣು, ಸಕ್ಕರೆ, ಮಾವಿನ ಹಣ್ಣುಗಳು ಇಡಬೇಕು.

**ಪವಿತ್ರಗ್ರಂಥ ರಾಮಾಯಣ:**

ವಾಲ್ಮೀಕಿ ರಾಮಾಯಣದ ಶ್ಲೋಕ ಸಂಖ್ಯೆ ಇಪ್ಪತ್ತನಾಲ್ಕು ಸಾವಿರವಾಗಿರುವುದು ಅರ್ಥಪೂರ್ಣವಾಗಿದೆ.

**ವೇದವೇದ್ಯೇ ಪರೇ ಪುಂಸಿ ಜಾತೇ ದಶರಥಾತ್ಮಜೇ ।**
**ವೇದಃ ಪ್ರಾಚೇತಸಾದಾಸೀತ್ ಸಾಕ್ಷಾದ್ ರಾಮಾಯಣಾತ್ಮನಾ ॥**

'ವೇದವೇದ್ಯ ಪರಮಪುರುಷ ನಾರಾಯಣನೆ ದಶರಥನಲ್ಲಿ ಶ್ರೀರಾಮನಾಗಿ ಅವತರಿಸಿದಾಗ ವೇದವೂ ವಾಲ್ಮೀಕಿಯಲ್ಲಿ ರಾಮಾಯಣವಾಗಿ ಅವತರಿಸಿತು'. ಆದರಿಂದ ವೇದಮಾತೆಯಾದ ಗಾಯತ್ರಿಯ ಇಪ್ಪತ್ತನಾಲ್ಕು ಅಕ್ಷರಗಳಿಂದ ರಾಮಾಯಣದ ಇಪ್ಪತ್ತನಾಲ್ಕು ಸಾವಿರ ಶ್ಲೋಕಗಳು ಹೊರಟವೆ.

**ಗಾಯತ್ರ್ಯಾಸ್ತ್ರೀಣಿ ಚತ್ವಾರಿ ದ್ವೇದ್ವೇ ತ್ರೀಣ್ಯಥ ಷಟ್ ಕ್ರಮಾತ್ ।**
**ಚತ್ವಾರಿ ಸಪ್ತಕಾಂಡೇಷು ಸ್ಥಾಪಿತಾನ್ಯಕ್ಷರಾಣಿ ತು ॥**

'ಗಾಯತ್ರಿಯ ಮೂರು ನಾಲ್ಕು ಎರಡು ಎರಡು ಮೂರು ಆರು ಮತ್ತು

ನಾಲ್ಕು ಅಕ್ಷರಗಳು ಕ್ರಮವಾಗಿ ಏಳುಕಾಂಡಗಳಲ್ಲಿವೆ' ಉದಾಹರಣೆಗೆ, ಸುಂದರ ಕಾಂಡದ ಪ್ರಾರಂಭದ ಶ್ಲೋಕ ಇದು—

**ತತೋ ರಾವಣನೀತಾಯಾಃ ಸೀತಾಯಾಃ ಶತ್ರುಕರ್ಶನಃ ।**
**ಇಯೇಷ ಪದಮನ್ವೇಷ್ಟುಂ ಚಾರಣಾಚರಿತೇ ಪಥಿ ॥**

ಇಲ್ಲಿ 'ರಾವಣ' ಎಂಬಲ್ಲಿರುವ 'ವ'ಕಾರ ಗಾಯತ್ರಿಯ ಹನ್ನೆರಡನೆ ಅಕ್ಷರವೆಂದು ಶ್ರೀ ಸತ್ಯಧರ್ಮತೀರ್ಥರು ಹೇಳುತ್ತಾರೆ—

**ರಾವಣೇತ್ಯತ್ರ ವಕಾರಃ ಗಾಯತ್ರ್ಯಾ ದ್ವಾದಶಾಕ್ಷರಂ ॥**

**ಗಾಯತ್ರೀಭಾಷ್ಯ ರಾಮಾಯಣಃ**

ಇನ್ನೂ ಒಳ ಹೊಕ್ಕು ನೋಡಿದರೆ ಗಾಯತ್ರಿಯ ಅರ್ಥವೆ ಸಪ್ತಕಾಂಡ ರಾಮಾಯಣದ ಅರ್ಥವೆಂಬುದು ಗೋಚರವಾಗದಿರದು.

**'ತತ್–ಗುಣಪೂರ್ಣ'** ಎಂಬ ಅರ್ಥದ 'ತತ್' ಎಂಬ ಶಬ್ದದಿಂದ ಪ್ರಾರಂಭವಾಗು ತ್ತದೆ ಗಾಯತ್ರಿ. ರಾಮಾಯಣವೂ,

**ಕೋ ನ್ವಸ್ಮಿನ್ ಸಾಂಪ್ರತಂ ಲೋಕೇ ಗುಣವಾನ್?**

'ಈ ಲೋಕದಲ್ಲಿ ಗುಣಪೂರ್ಣನಾದವನು ಯಾರು?' ಎಂಬ ವಾಲ್ಮೀಕಿಯ ಪ್ರಶ್ನೆಗೆ ಉತ್ತರವಾಗಿ,

**ಇಕ್ಷ್ವಾಕು ವಂಶಪ್ರಭವೋ ರಾಮೋ ನಾಮ ಜನೈಃ ಶ್ರುತಃ ।**

ಇಕ್ಷ್ವಾಕುವಂಶದಲ್ಲಿ ಅವತರಿಸಿದ ಶ್ರೀರಾಮನೊಬ್ಬನೆ ಗುಣಪೂರ್ಣ' ಎಂದು ನಾರದರು ಹೇಳುವ ಮಾತಿನಿಂದಲೆ ಪ್ರಾರಂಭವಾಗುತ್ತದೆ. ಮುಂದೆ ರಾಮನ ಈ ಗುಣಪೂರ್ಣ ವ್ಯಕ್ತಿತ್ವವನ್ನ ಸುಂದರವಾಗಿ ಚಿತ್ರಿಸುತ್ತದೆ ರಾಮಾಯಣ. ಮರ್ಯಾದಾ ಪುರುಷೋತ್ತಮನ ಗುಣಗಾನ ಮಾಡುತ್ತದೆ.

**ಸವಿತುಃ—** ಗಾಯತ್ರಿಯ ಸವಿತೃಶಬ್ದ ಹರಿಯ ಸೃಷ್ಟಿಕರ್ತೃತ್ವಗುಣವನ್ನು ಹೇಳುತ್ತದೆ. ರಾಮಾಯಣದ ಬಾಲಕಾಂಡವೂ ಅದನ್ನೇ ವರ್ಣಿಸುತ್ತದೆ. ರಾಮಾವತಾರವೆ ಮೊದಲಿಗೆ ರಾಮ ತಾನೆ ಮಾಡಿಕೊಂಡ ಆತ್ಮಸೃಷ್ಟಿ. ಜೊತೆಗೆ ಸಂಕರ್ಷಣ ಪ್ರದ್ಯುಮ್ನ ಅನಿರುದ್ಧ ರೂಪಗಳ ಆವೇಶಾವತಾರರಾದ ಲಕ್ಷ್ಮಣ ಭರತ ಶತ್ರುಘ್ನರ ಜನನವೂ ಆತ್ಮಸೃಷ್ಟಿಯೆ. ಬ್ರಹ್ಮನ ವರಬಲದಿಂದ ವಾಲ್ಮೀಕಿ ಮುನಿ

ರಾಮಾಯಣ ಬರೆದ ಅಂಶ ಬಾಲಕಾಂಡದ ಆದಿಯಲ್ಲಿಯೆ ಬರುತ್ತದೆ. ಇದೂ ಆದಿಕಾವ್ಯದ ಸೃಷ್ಟಿ ಪ್ರಕ್ರಿಯೆಯೆ.

ವರೇಣ್ಯಂ— ವರೇಣ್ಯ ಎಂದರೆ ವರಣೀಯ, ಶ್ರೇಷ್ಠ. ಅಯೋಧ್ಯಾಕಾಂಡದಲ್ಲಿ ಶ್ರೀರಾಮನಿಗೆ ಯೌವರಾಜ್ಯಾಭಿಷೇಕ ನಡೆಸುವ ತನ್ನ ಇಚ್ಛೆಯನ್ನು ದಶರಥ ಪ್ರಜೆಗಳ ಮುಂದಿಟ್ಟಾಗ ಎಲ್ಲ ಪ್ರಜೆಗಳೂ ಒಕ್ಕೊರಲಿಂದ ಅನುಮೋದಿಸಿ ಶ್ರೀ ರಾಮನ ವರಣೀಯತ್ವವನ್ನು ಪ್ರಕಟಪಡಿಸಿದರು. ಪ್ರಜೆಗಳೆಲ್ಲರೂ ಮನಸಾರೆ ಬಯಸಿದ ರಾಮ ಪಟ್ಟಾಭಿಷೇಕ ಮಂಥರೆಗೆ ಮಾತ್ರ ಅನಿಷ್ಟವೆನಿಸಿದುದು ಸರ್ವ ಪ್ರಮಾಣಸಿದ್ಧವಾದ ಹರಿಸರ್ವೋತ್ತಮತ್ವದ ವಿಷಯದಲ್ಲಿ ಆಗ್ರಹದಿಂದ ಅಪಸ್ವರವೆತ್ತುವವರು ಇದ್ದಾರೆ ಎನ್ನಲು ಸಾಕ್ಷಿ.

ಭರ್ಗಃ— ಸಜ್ಜನರ ರಕ್ಷಕ ಮತ್ತು ಪೋಷಕ. ಅಥವಾ ದುರ್ಜನರೆಂಬ ಕಾಡನ್ನು ಸುಡುವ ಬೆಂಕಿ. ಅರಣ್ಯಕಾಂಡ ಈ ಎರಡೂ ಅರ್ಥಕ್ಕೆ ವಿವರಣ ರೂಪವೆನ್ನಬಹುದು. ಮುನಿಗಳ ರಕ್ಷಣೆ ಪೋಷಣೆಗಳಿಗಾಗಿ ಶ್ರೀರಾಮ ವನವಾಸ ಕೈಗೊಂಡ. ಪಿತೃವಾಕ್ಯ ಪರಿಪಾಲನೆ ನಿಮಿತ್ತಮಾತ್ರ. ಬೆಂಕಿಯಂತೆ ಶೌರ್ಯಪರಾಕ್ರಮಗಳನ್ನು ತೋರುತ್ತ ಅರಣ್ಯದಲ್ಲಿ ಸಂಚರಿಸಿ ರಾಕ್ಷಸರನ್ನು ಸಂಹರಿಸಿದ.

ದೇವಸ್ಯ— ಲೀಲೆ, ಕ್ರೀಡೆ ದೇವಶಬ್ದಾರ್ಥ. ಕಿಷ್ಕಿಂಧಾಕಾಂಡ ಶ್ರೀರಾಮನ ಅಚಿಂತ್ಯ ಲೀಲೆಯನ್ನೇ ವರ್ಣಿಸುತ್ತದೆ. ಮೊದಲಿಗೆ ಹೆಂಡತಿಯನ್ನು ಕಳೆದುಕೊಂಡು ಅಳುವ ಅನಾಥನಾದ ಸಾಮಾನ್ಯ ಮಾನವನಂತೆ ಕಾಣುತ್ತಾನೆ ರಾಮ. ಶೋಕದಿಂದ ಹುಚ್ಚನಂತಾಗಿ ದೈನ್ಯದಿಂದ ಕಲ್ಲೂ ಕರಗುವಂತೆ ಅಳುತ್ತಾ ಕಿಷ್ಕಿಂಧೆಯನ್ನು ಪ್ರವೇಶಿಸುತ್ತಾನೆ. ತ್ರಿಲೋಕ ಭಯಂಕರನಾದ ರಾವಣನನ್ನು ಬಾಲದಿಂದ ಬಿಗಿದು ತನ್ನ ಮಗುವಿನ ತೊಟ್ಟಿಲಿಗೆ ಕಟ್ಟಿದ್ದ ಪರಾಕ್ರಮಿಯಾದ ವಾಲಿಯನ್ನು ಒಂದೇ ಬಾಣದಿಂದ ಕೊಂದು ಅಪಾರವಾದ ಕಪಿಸೇನಾ ಸಮೇತನಾದ ಸುಗ್ರೀವನ ಸಹಾಯವನ್ನು ಸಂಪಾದಿಸಿದುದು ಸರ್ವೇಶ್ವರನಾದ ರಾಮನ ಲೀಲೆಯೆ ಸರಿ.

ಧೀಮಹಿ— ನಾವು ಧ್ಯಾನಿಸುತ್ತೇವೆ, ಅಂದರೆ ನಾವು ಧ್ಯಾನಿಸುವಂತಾಗಲಿ ಎನ್ನುವ ಧೀಮಹಿ ಶಬ್ದಕ್ಕೆ ಸುಂದರಕಾಂಡ ಭಾಷ್ಯದಂತಿದೆ. ರಾಮಧ್ಯಾನವೆ ಮೂರ್ತಿಮತ್ತಾಗಿ ಬಂದಂತಿರುವವ ಹನುಮಂತ. ರಾಮಕಾರ್ಯವನ್ನೇ ಧ್ಯಾನಿಸುತ್ತ ಸಮುದ್ರವನ್ನು ಹಾರುವಾಗ ಅವನಿಗೆ ನಡುವೆ ಮೈನಾಕಪರ್ವತನ ಆತಿಥ್ಯ ಬೇಡವಾಯಿತು. ನಡುರಾತ್ರಿ ಎಲ್ಲರೂ ನಿದ್ರಿಸಿದ ಸಮಯದಲ್ಲಿ ರಾವಣನ ಅಂತಃಪುರವನ್ನು ಪ್ರವೇಶಿಸಿ ಸೀತೆಯನ್ನು ಅನ್ವೇಷಣೆ ಮಾಡುವಾಗ ಅಲ್ಲಿ ಮದ್ಯಪಾನಮಾಡಿ ಅಸ್ತವ್ಯಸ್ತವಾಗಿ ಮಲಗಿದ್ದ ಸಾವಿರಾರು ಸುಂದರ ಸ್ತ್ರೀಯರನ್ನು ಕಂಡರೂ ಅವನಿಗೆ ಮನಸ್ಸಿನಲ್ಲಿ

ಯಾವುದೇ ವಿಕಾರವಾಗಲಿಲ್ಲ. ಕಾರಣ ಇನ್ನೇನೂ ಅಲ್ಲ. ರಾಮಧ್ಯಾನ. ಅವನೆ ಹೇಳಿದ್ದಾನೆ—

**ನ ತು ಮೇ ಮನಸಾ ಕಿಂಚಿತ್ ವೈಕೃತ್ಯಮುಪಪದ್ಯತೇ ।**

ಧಿಯೋ ಯೋನಃ ಪ್ರಚೋದಯಾತ್—ಭಗವಂತ ನಮ್ಮೆಲ್ಲರ ಬುದ್ಧಿ ಪ್ರೇರಕ. ಯುದ್ಧಕಾಂಡ ಇದನ್ನೇ ಸ್ಪಷ್ಟಪಡಿಸುತ್ತದೆ. ರಾವಣನಿಗೆ ಮಾರೀಚ ಮೊದಲೆ ರಾಮನ ಪರಾಕ್ರಮವನ್ನು ತಿಳಿಸಿದ್ದ. ವಿಭೀಷಣ ಸರ್ವಪ್ರಯತ್ನಮಾಡಿ ರಾವಣನ ಮನ ಒಲಿಸಲು ಯತ್ನಿಸಿದ. ಸೀತೆಯನ್ನು ಹಿಂತಿರುಗಿಸಿ ಯುದ್ಧವನ್ನು ಕೈ ಬಿಡಲು ಸಲಹೆ ಇತ್ತ. ಆದರಲ್ಲಿ ವಿಫಲನಾಗಿ ರಾವಣನನ್ನು ತ್ಯಜಿಸಿ ರಾಮನ ಪಕ್ಷಕ್ಕೆ ಸೇರಿದ. ಆದರೂ ರಾವಣನಿಗೆ ಬುದ್ಧಿ ಬರಲಿಲ್ಲ. ಏಕೆಂದರೆ ಭಗವಂತ ಹಾಗೆ ಪ್ರೇರಣೆ ನೀಡಲಿಲ್ಲ. ವಿನಾಶಕಾಲೇ ವಿಪರೀತ ಬುದ್ಧಿಃ ।

"ನಃ" ನಮಗೆ ಅಂದರೆ ಸಜ್ಜನರಿಗೆ ಮಾತ್ರ ಧರ್ಮಮಾರ್ಗದಲ್ಲಿ ಬುದ್ಧಿ ಪ್ರೇರಿಸುತ್ತಾನೆ. ದುರ್ಜನರಿಗೆ ದುರ್ಬುದ್ಧಿಯನ್ನೆ ಪ್ರಚೋದಿಸುತ್ತಾನೆ. ಇದಕ್ಕೆ ಉತ್ತರಕಾಂಡ ಕಥೆಯೆ ಸಾಕ್ಷಿ. ಹತ್ತು ಸಾವಿರ ವರ್ಷಕಾಲ ರಾಮರಾಜ್ಯವಿತ್ತು. ಪ್ರಜೆಗಳು ಸುಖದಿಂದ ಬಾಳಿದರು. ಇದಕ್ಕೆ ಅವರ ಸದ್ಬುದ್ಧಿ ಕಾರಣ—

**ರಾಮೋ ರಾಮೋ ರಾಮ ಇತಿ ಸರ್ವೇಷಾಮಭವತ್ತದಾ ।**
**ಸರ್ವೋ ರಾಮಮಯೋ ಲೋಕೋ ಯದಾ ರಾಮಸ್ತ್ವಪಾಲಯತ್ ॥**

ರಾಮರಾಜ್ಯದಲ್ಲಿ ಪ್ರಜೆಗಳೆಲ್ಲರೂ ರಾಮ ರಾಮ ರಾಮ ಎಂದು ರಾಮಮಯ ರಾಗಿದ್ದರು. ಆದರೆ ಕೊನೆಯಲ್ಲಿ ಸುರಾಣಕರೆಂಬ ದಾನವರು ಬಹುಸಂಖ್ಯೆಯಲ್ಲಿ ಹುಟ್ಟಿಕೊಂಡು ರಾಮನ ಮೇಲೆ ಅಪವಾದ ಹಾಕಿ ಸೀತಾ ಪರಿತ್ಯಾಗ ಮಾಡಿಸಿದರು. ಇದು ದುರ್ಬುದ್ಧಿ ಪ್ರೇರಣೆಯಾದುದರ ಫಲ.

ಬ್ರಹ್ಮವಿದ್ಯೆ ರಾಮಾಯಣ:

**ವೇದಃ ಪ್ರಾಚೇತಸಾದಾಸೀತ್ ಸಾಕ್ಷಾದ್ ರಾಮಾಯಣಾತ್ಮನಾ ।**

ಎಂಬಂತೆ ವಾಲ್ಮೀಕಿ ರಾಮಾಯಣ ಬ್ರಹ್ಮವಿದ್ಯೆಯೆ ಆಗಿದೆ. ಆದಿಯಲ್ಲಿ 'ತಪಃಸ್ವಾಧ್ಯಾಯ ನಿರತಂ' ಎಂದು 'ತಪಃ' ಶಬ್ದದಿಂದ 'ಯಸ್ಯ ಜ್ಞಾನಮಯಂ ತಪಃ' ಎಂಬಂತೆ ಚಿನ್ಮಯ ಮೂರ್ತಿಯಾದ ರಾಮನನ್ನು ನಿರ್ದೇಶಿಸಿದೆ. ಅಲ್ಲಿ ತಕಾರ ಮಾತ್ರವೂ ಮುಖ್ಯಪ್ರಾಣನ ಪ್ರತಿಮೆ. ಓಂಕಾರದಂತೆ ಹರಿಯ ಗುಣಪೂರ್ಣತ್ವವನ್ನು ಹೇಳುತ್ತದೆ—

'ತಥೌ ಪ್ರಾಣಾತ್ಮಕೌ ಪ್ರೋಕ್ತೌ ವ್ಯಾಪ್ತಿ ಸ್ಥಿತಿ ವಿಧಾಯಕೌ'— ಗರುಡ ಪುರಾಣ

ಅಂತಿಮ ಮಂಗಳಾಚರಣೆಯಲ್ಲಿ 'ಶ್ರೀಹರಿಗೆ ಜಯವಾಗಲೆಂದು ನಿಃಸಂಕೋಚ ವಾಗಿ ಗಟ್ಟಿಯಾಗಿ ಹೇಳಿರಿ' ಎಂದು ಆದೇಶವಿದೆ—

'ಪ್ರವ್ಯಾಹರತ ವಿಸ್ರಬ್ಧಂ ಬಲಂ ವಿಷ್ಣೋಃ ಪ್ರವರ್ಧತಾಂ।' ಇಲ್ಲಿಯೂ ಕೊನೆಯ ಅಕ್ಷರ ತಕಾರ. ಹೀಗೆ ಆದ್ಯಂತಗಳಲ್ಲಿ ಮುಖ್ಯಪ್ರಾಣನ ಪ್ರತಿಮಾರೂಪವಾಗಿದ್ದು ವಿಷ್ಣುವಿನ ಗುಣಪೂರ್ಣತ್ವವನ್ನು ಹೇಳುವ ತಕಾರಗಳಿಂದ ಸಂಪುಟಿತವಾಗಿದೆ ರಾಮಾಯಣ.

ಒಂದು ಸುಭಾಷಿತವೂ ಹೀಗೆ ಹೇಳುತ್ತದೆ—

**ಪ್ರಾತರ್ದ್ಯೂತ ಪ್ರಸಂಗೇನ ಮಧ್ಯಾಹ್ನೇ ಸ್ತ್ರೀಪ್ರಸಂಗತಃ ।**
**ರಾತ್ರೌ ಚೋರ ಪ್ರಸಂಗೇನ ಕಾಲೋ ಗಚ್ಛತಿ ಧೀಮತಾಂ ॥**

'ಬೆಳಿಗ್ಗೆ ಜೂಜು, ಮಧ್ಯಾಹ್ನ ಸ್ತ್ರೀ ಸಂಗ, ರಾತ್ರಿ ಕಳವುಗಳಿಂದಲೆ ವಿವೇಕಿಗಳು ಕಾಲಕ್ಷೇಪ ಮಾಡುತ್ತಾರೆ'— ಇದು ಮೇಲೆ ಕಾಣುವ ಅರ್ಥ.

ಬೆಳಿಗ್ಗೆ ಪಾಂಡವರ ದ್ಯೂತಕಥೆಯಾದ ಭಾರತವನ್ನೂ ಮಧ್ಯಾಹ್ನ ಸೀತಾ ಪಹಾರದ ಕಥೆಯಾದ ರಾಮಾಯಣವನ್ನೂ ರಾತ್ರಿಯಲ್ಲಿ ನವನೀತಚೋರನ ಕಥೆ ಯಾದ ಭಾಗವತವನ್ನೂ ಅಧ್ಯಯನ ಮಾಡುತ್ತ ಕಾಲಕ್ಷೇಪ ಮಾಡುತ್ತಾರೆ ಎಂದು ಒಳಗಿನ ಅರ್ಥ.

**ರಾಮಾಯಣ ಟೀಕೆಗಳು**

ವಾಲ್ಮೀಕಿರಾಮಾಯಣಕ್ಕೆ ಗೋವಿಂದರಾಜೀಯ ಭೂಷಣಟೀಕೆ ಕುಂಭಕೋಣದ ಶ್ರೀ ಟಿ.ಆರ್. ಕೃಷ್ಣಾಚಾರ್ಯರ ಪ್ರಕಟಣೆಯಲ್ಲಿ ಸಮಗ್ರವಾಗಿ ಬಂದಿದೆ. ಶ್ರೀ ಸತ್ಯಪರಾಯಣ ತೀರ್ಥರು ಬಾಲಕಾಂಡಕ್ಕೆ ವ್ಯಾಖ್ಯಾನ ಬರೆದಿದ್ದರು ಎನ್ನುತ್ತಾರೆ. ಬಾಲಕಾಂಡಕ್ಕೆ ಹೊರತು ಇತರ ಎಲ್ಲ ಕಾಂಡಗಳಿಗೂ ಸತ್ಯಧರ್ಮತೀರ್ಥರ ಟೀಕೆ ಇದೆ. ಆದರ ಮುಖ್ಯಾಂಶಗಳು ಮಾತ್ರ ಟಿ.ಆರ್. ಕೃಷ್ಣಾಚಾರ್ಯರ ಪ್ರಕಟಣೆಯಲ್ಲಿ ಬಂದಿದೆ. ಮಾಧವ ಯೋಗಿಯ ಅಮೃತಕತಕ ವ್ಯಾಖ್ಯಾನ ಮೈಸೂರಿನ ಪ್ರಾಚ್ಯ ಸಂಶೋಧನಾಲಯದ ಪ್ರಕಟಣೆಯಲ್ಲಿ ಸಮಗ್ರವಾಗಿ ಬಂದಿದೆ. ನಾಗೋಜಿ ಭಟ್ಟನ ತಿಲಕ, ಮಹೇಶ್ವರ ತೀರ್ಥೀಯ ತತ್ತ್ವದೀಪಿಕೆ, ತ್ರ್ಯಂಬಕರಾಜ ಮಖಾನಿಯ ಧರ್ಮಾ ಕೂತ, ತನಿಶ್ಲೋಕೀ, ವೈದ್ಯನಾಥ ದೀಕ್ಷಿತನ ದೀಪಿಕಾ, ರಾಮಾನುಜ ವ್ಯಾಖ್ಯಾನ,

ಯುಧಿಷ್ಠಿರನ ಪ್ರಾರ್ಥನೆಯಂತೆ ವೇದವ್ಯಾಸರೆ ಬರೆದುದೆನ್ನಲಾದ ತಾತ್ಪರ್ಯದೀಪಿಕೆ, ಹರಿಪಂಡಿತನ ಭಾವಪ್ರಕಾಶಿಕಾ, ಅಹೋಬಲನ ವಾಲ್ಮೀಕಿ ಹೃದಯ, ಅಹೋಬಲ ಶಿಷ್ಯನ ವಿರೋಧಭಂಜಿನಿ, ಅಪ್ಪಯ ದೀಕ್ಷಿತನ ತಾತ್ಪರ್ಯ ಸಂಗ್ರಹ, ವರದರಾಜನ ವಿವೇಕ ತಿಲಕ, ರಾಮಾನಂದ ತೀರ್ಥನ ಕೂಟ, ಶಿವಸಹಾಯನ ಶಿರೋಮಣಿ, ಪ್ರಬಾಲ ಮುಕುಂದನ ಭೂಷಣ, ರಾಮಭದ್ರಾಶ್ರಮನ ಸುಬೋಧಿನೀ, ದೇವರಾಮಭಟ್ಟನ ವಿಷಮ ಪದಾರ್ಥ, ನೃಸಿಂಹಶಾಸ್ತ್ರಿಯ ಕಲ್ಪವಲ್ಲಿಕಾ, ವೆಂಕಟಾಚಾರ್ಯನ ಅರ್ಥಪ್ರಕಾಶಿಕಾ ಮುಂತಾದ ಅನೇಕ ವ್ಯಾಖ್ಯಾನಗಳೂ ಇವೆ.

### ನಿರ್ಣಯ ಮತ್ತು ರಾಮಾಯಣ

ಶ್ರೀ ಮಧ್ವಾಚಾರ್ಯರ ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ ಮೊದಲಿಗೆ ರಾಮಾಯಣದ ತಾತ್ಪರ್ಯ ಬರೆಯುತ್ತಾರೆ. ಇದು ಮೂಲರಾಮಾಯಣದ ತಾತ್ಪರ್ಯವೂ ಹೌದು. ವಾಲ್ಮೀಕಿ ರಾಮಾಯಯಣದ ತಾತ್ಪರ್ಯವೂ ಹೌದು. ವಾಲ್ಮೀಕಿ ರಾಮಾಯಣದ ಕೆಲವು ಶಬ್ದ ಪ್ರಯೋಗದ ಗಾಂಭೀರ್ಯವನ್ನು ತಿಳಿಯಬೇಕಾದರೆ ನಿರ್ಣಯದ ಸಹಾಯ ಅತ್ಯವಶ್ಯ. ಉದಾ:

**ಸ ಹತಾನ್ ದೃಶ್ಯ ರಾಮೇಣ ಸ್ವಾನ್‌ಲೋಕಾನ್ ತಪಸಾರ್ಜಿತಾನ್ ।**
**ಜಾಮದಗ್ನ್ಯೋ ಜಗಾಮಾಶು ಮಹೇಂದ್ರಂ ಪರ್ವತೋತ್ತಮಂ ॥**

**(ಬಾಲ. 76.22)**

'ತಪಸ್ಸಿನಿಂದ ಸಂಪಾದಿತವಾದ ಲೋಕಗಳನ್ನು ರಾಮ ನಾಶಪಡಿಸಿದ್ದನ್ನು ಕಂಡು ಪರಶುರಾಮ ಮಹೇಂದ್ರ ಪರ್ವತಕ್ಕೆ ತೆರಳಿದ.'

ಇಲ್ಲಿ ಪರಶುರಾಮ ತಪಸ್ಸು ಮಾಡಿ ಗಳಿಸಿದ್ದ ಪುಣ್ಯಲೋಕಗಳನ್ನು ರಾಮ ನಾಶಪಡಿಸಿದನೆಂದು ವಾಲ್ಮೀಕಿ ಹೇಳುವನೆ? ಸರ್ವಥಾ ಇಲ್ಲ. ನಿರ್ಣಯ ಹೇಳುತ್ತದೆ—

**ಪುರಾತುಲೋ ನಾಮ ಮಹಾಸುರೋಽಭವತ್**
**ವರಾತ್ ಸ ತು ಬ್ರಹ್ಮಣ ಆಪ ಲೋಕತಾಂ ।**

'ಅತುಲನೆಂಬ ಮಹಾಸುರನಿದ್ದ. ಅವನು ಬ್ರಹ್ಮನ ವರದಿಂದ ಲೋಕ ನೆನಿಸಿದ.' ಇಲ್ಲಿ ಲೋಕನೆನಿಸುವುದು ಲೋಕವ್ಯಾಪ್ತನಾದ್ದರಿಂದ. ಏಕೆಂದರೆ ಮುಂದೆ ನಿರ್ಣಯವೆ 'ಮಹಾಸುರೇ ಲೋಕಮಯೇ' ಎನ್ನುತ್ತಿದೆ. ಆದರಿಂದ ಲೋಕವ್ಯಾಪ್ತನಾದ್ದರಿಂದ ಲೋಕನೆನಿಸಿದವ ಅತುಲಾಸುರ. 'ಲೋಕಾನ್' ಎಂಬ ಬಹುವಚನದಿಂದ ಅವನ

ಅಂಶಗಳನ್ನು ಗ್ರಹಿಸಬೇಕು. ಇದೇ ರೀತಿ 'ತಪಸ್ಸಿನಿಂದ ಸಂಪಾದಿತವಾದ' ಎಂಬಲ್ಲಿ ತಪಸ್ಸು ಎಂದರೂ ತಪೋಮಯನಾದ ಅಂದರೆ ಬಹಳ ತಪಸ್ಸು ಮಾಡಿದ ಅತುಲಾಸುರ ಎಂದೇ ಅರ್ಥ. ಪರಶುರಾಮನ ತಪಸ್ಸೆಂದಲ್ಲ. ನಿರ್ಣಯ ಇದನ್ನು ಸ್ಪಷ್ಟವಾಗಿ ಹೇಳುತ್ತದೆ—

**ವಿಸರ್ಜಯಸ್ವೇಹ ಶರಂ ತಪೋಮಯೇ**
**ಮಹಾಸುರೇ ಲೋಕಮಯೇ ವರಾದ್ವಿಭೋ: ।**

'ರಾಮ, ನೀನು ನನ್ನ ಹೊಟ್ಟೆಯಲ್ಲಿ ಅಡಗಿರುವ ತಪೋಮಯ ಲೋಕಮಯ ನಾದ ಮಹಾಸುರನ ಮೇಲೆ ಬಾಣ ಪ್ರಯೋಗ ಮಾಡು.'

ಉಪನಿಷತ್ತಿನಲ್ಲಿ ಅನ್ನಮಯ ಪ್ರಾಣಮಯ ಮುಂತಾದುವನ್ನು ಅನ್ನಪ್ರಾಣ ಎಂದು ಮುಂತಾಗಿಯೂ ವ್ಯವಹರಿಸುವಂತೆ ತಪೋಮಯ ಅಸುರನಿಂದ ಸಂಪಾದಿತ ವಾದ ಲೋಕಮಯ ಅಸುರಾಂಶಗಳನ್ನು ವಾಲ್ಮೀಕಿ ತಪಸ್ಸಿನಿಂದ ಸಂಪಾದಿತವಾದ ಲೋಕಗಳನ್ನು ಎಂದು ಗೂಢಾಭಿಪ್ರಾಯದಿಂದ ವರ್ಣಿಸಿದ್ದಾನೆ. ಇದನ್ನು ಸೂಚಿಸುವುದಕ್ಕೇ ಶ್ರೀಮದಾಚಾರ್ಯರೂ 'ಆಪ ಲೋಕತಾಂ' ಎಂಬ ವಿಲಕ್ಷಣ ಪ್ರಯೋಗ ಮಾಡಿದ್ದಾರೆ.

ಹೀಗೆ ವಾಲ್ಮೀಕಿರಾಮಾಯಣದ 'ತಪಸ್' 'ಲೋಕ' ಶಬ್ದಗಳಿಗೇ ಸರಿಯಾದ ವ್ಯಾಖ್ಯಾನವನ್ನು ನಿರ್ಣಯ ಮಾಡುತ್ತಿದೆ ಎಂದರೆ ವಾಲ್ಮೀಕಿ ರಾಮಾಯಣದ ಪ್ರತಿಯೊಂದು ಶಬ್ದವೂ ಗ್ರಾಹ್ಯವೆಂಬುದು ನಿರ್ಣಯಕ್ಕೆ ಸಂಮತವೆಂದಂತಾಯಿತು. ಅದರಿಂದ 'ಯಚ್ಚಾನುಕೂಲಮೇತಸ್ಯ' ಎನ್ನುವ ಶಾಸ್ತ್ರಾನುಕೂಲ್ಯವೆಂಬ ಪ್ರಾಮಾಣ್ಯ ಮಾತ್ರವಲ್ಲದೆ ಮೂಲರಾಮಾಯಣದ ಪ್ರತ್ಯಕ್ಷರ ಪ್ರತಿಪದ ಪ್ರಾಮಾಣ್ಯವೂ ವಾಲ್ಮೀಕಿ ರಾಮಾಯಣಕ್ಕೆ ಇದೆ ಎನ್ನಬೇಕಾಗುತ್ತದೆ.

ಮೂಲ ರಾಮಾಯಣದ ಭಾವವನ್ನೆ ಪ್ರತಿಬಿಂಬಿಸುವ ವಾಲ್ಮೀಕಿರಾಮಾಯಣ ವನ್ನು ನಿರ್ಣಯದ ಹಾಗೂ ನಿರ್ಣಯಾನುಸಾರಿ ಸತ್ಯಧರ್ಮೀಯ ಟೀಕೆಯ ಸಹಾಯವಿಲ್ಲದೆ ಅಧ್ಯಯನ ಮಾಡುವ ಸಾಹಸಕ್ಕೆ ತೊಡಗಬಾರದು.

**ಭಾಗವತ ಸತ್ಯಧರ್ಮೀಯ:**

ಶ್ರೀ ಸತ್ಯಧರ್ಮರು ನಿರ್ಣಯಕ್ಕೆ ಅನುಗುಣವಾಗಿ ವಾಲ್ಮೀಕಿ ರಾಮಾಯಣ

ಶ್ಲೋಕಗಳ ಪ್ರತಿಪದ ವ್ಯಾಖ್ಯಾನ ಮಾಡುತ್ತಾರೆ, ಅನುಪಪತ್ತಿಗಳಿದ್ದರೆ ತೋರಿಸಿ ಸಮಾಧಾನವನ್ನು ಹೇಳುತ್ತಾರೆ. ಅವರ ಭಾಗವತವ್ಯಾಖ್ಯಾನ ಶೈಲಿಯಲ್ಲಿಯೆ ಇದೆ ರಾಮಾಯಣವ್ಯಾಖ್ಯಾನ. ಭಾಗವತದ ರಾಮಕಥಾವ್ಯಾಖ್ಯಾನ ರಾಮಾಯಣ ವ್ಯಾಖ್ಯಾನಕ್ಕೆ ಪೂರಕವೆನ್ನುವಂತಿದೆ, ಉದಾ: ದಶರಥನ ಅಂಶಾವತಾರದ ವಿಚಾರ. ವಾಲ್ಮೀಕಿರಾಮಾಯಣದಲ್ಲಿ ದಶರಥ ಮನುವಿನ ಅವತಾರವೆಂಬ ಸೂಚನೆ ಇದೆ—

ಯಥಾ ಮನುರ್ಮಹಾತೇಜಾ ಲೋಕಸ್ಯ ಪರಿರಕ್ಷಿತಾ ।
ತಥಾ ದಶರಥೋ ರಾಜಾ ಲೋಕಸ್ಯ ಪರಿರಕ್ಷಿತಾ ॥

'ಹಿಂದೆ ಮಹಾಪರಾಕ್ರಮಿಯಾದ ಮನುಮಹಾರಾಜ ಹೇಗೆ ಲೋಕವನ್ನು ಆಳಿದ್ದನೋ ಹಾಗೇ ಇಂದು ರಾಜಾ ದಶರಥನೂ ಆಳುತ್ತಿದ್ದಾನೆ.' ಇಲ್ಲಿ ಉಪಮೆಯ ನೆಪದಿಂದ ದಶರಥನ ಸ್ವರೂಪವನ್ನೆ ತಿಳಿಸುತ್ತಿದ್ದಾನೆ ವಾಲ್ಮೀಕಿ ಎಂದರೆ ತಪ್ಪಾಗಲಾರದು. ಏಕೆಂದರೆ ವಾಮನ ಪುರಾಣದಲ್ಲಿ ದಶರಥ ಕೇವಲ ಮನು ಸದೃಶನಲ್ಲ, ಮನುವೆ ಆಗಿದ್ದಾನೆ ಎಂದಿದೆ. ವಾಲ್ಮೀಕಿಗೂ ಅದೇ ಅಭಿಪ್ರಾಯ ವಿದ್ದೀತು. ವಾಮನ ಪುರಾಣದ ವಾಕ್ಯ ಹೀಗಿದೆ—

ಭವಿಷ್ಯದಂತರೇ ಭೂತ್ವಾ ಮನುರ್ವೈವಸ್ವತೋ ಭವಾನ್ ।
ತವ ವಂಶೇ ಭವಾಮ್ಯಂಗ ರಾಮೋ ದಾಶರಥಿಃ ಸ್ವಯಂ ।
ಪುನರ್ದಶರಥೋ ಭೂತ್ವಾ ತ್ವಮೇವಾಸಿ ಪಿತಾ ಮಮ ॥

'ಮುಂದಿನ ಮನ್ವಂತರದಲ್ಲಿ ನೀನು ವೈವಸ್ವತ ಮನುವಾಗಿ ಹುಟ್ಟುವಿ. ನಿನ್ನ ವಂಶದಲ್ಲಿ ನಾನು ದಾಶರಥಿರಾಮನಾಗಿ ಅವತರಿಸುವೆನು. ಆಗ ನೀನು ದಶರಥನಾಗಿ ಹುಟ್ಟಿ ನನಗೆ ತಂದೆ ಎನಿಸುವಿ.'

ಇಲ್ಲಿ ಒಂದು ತೊಡಕಿದೆ. ವಾಮನ ಪುರಾಣ ವೈವಸ್ವತ ಮನು ಎನ್ನುತ್ತಿದ್ದರೆ ಪದ್ಮ ಪುರಾಣ ಸ್ವಾಯಂಭುವ ಮನು ಎನ್ನುತ್ತಿದೆ. ವಾಲ್ಮೀಕಿ ರಾಮಾಯಣ ಎರಡನ್ನೂ ಸಂಮತಿಸುವಂತೆ ಕೇವಲ'ಮನು' ಎನ್ನುತ್ತಿದೆ. ಯಾವ ಮನು ಎಂದು ಸ್ಪಷ್ಟ ಹೇಳಿಲ್ಲ. ಪದ್ಮಪುರಾಣ ವಚನ ಹೀಗಿದೆ—

ತಸ್ಮಾಭೂತ್ ಪ್ರಥಮಂ ಜನ್ಮ ಮನೋಃ ಸ್ವಾಯಂಭುವಸ್ಯ ತು ।
ರಘೂಣಾಮನ್ವಯೇ ಪೂರ್ವಂ ರಾಜಾ ದಶರಥೋಽಭವತ್.... ॥

'ರಘುಕುಲದಲ್ಲಿ ದಶರಥನಾಗಿ ಜನಿಸಿದುದು ಸ್ವಾಯಂಭುವ ಮನುವಿನ

ಮೊದಲನೆ ಅವತಾರ. ಎರಡನೆಯದು ಕೃಷ್ಣಾವತಾರದಲ್ಲಿ ವಸುದೇವ. ಮೂರನೆಯದು ಕಲ್ಕ್ಯವತಾರದಲ್ಲಿ ಶಂಬಲಗ್ರಾಮವಾಸಿ ವಿಷ್ಣುವ್ರತ.'

ಶ್ರೀ ನಾರಾಯಣಪಂಡಿತಾಚಾರ್ಯರು ಅಂಶಾವೇಶಾವತಾರ ನಿರ್ಣಯದಲ್ಲಿ ಈ ಪದ್ಮಪುರಾಣವಚನವನ್ನೇ ಆದರಿಸಿ ಹೀಗೆ ಹೇಳಿದ್ದಾರೆ—

ರಾಜಾ ದಶರಥಃ ಪೂರ್ವಂ ಮನುಃ ಸ್ವಾಯಂಭುವಃ ಸ್ಮೃತಃ ।
ವ್ಯಕ್ತಂ ಪದ್ಮಪುರಾಣೇ ತು ಹ್ಯವತಾರ ಪ್ರಸಂಗತಃ ॥

'ರಾಜಾ ದಶರಥ ಹಿಂದೆ ಸ್ವಾಂಭುವ ಮನುವಾಗಿದ್ದ. ಇದು ಪದ್ಮಪುರಾಣದ ಅವತಾರ ಪ್ರಸಂಗದಲ್ಲಿ ಉಕ್ತವಾಗಿದೆ.'

ಈಗ ಪಂಡಿತಾಚಾರ್ಯರ ನಿರ್ಣಯದ ಮೇಲೆ ಸಂದೇಹ. ಇಲ್ಲಿ ಶ್ರೀಮದಾಚಾರ್ಯರ ನಿರ್ಣಯ ಏನು ಹೇಳುತ್ತಿದೆ?

ಸ ಕಶ್ಯಪಸ್ಯಾದಿತಿಗರ್ಭಜನ್ಮನೋ
ವಿವಸ್ವತಸ್ತಂತುಭವಸ್ಯ ಭೂಭೃತಃ ।
ಗೃಹೇ ದಶಸ್ಯಂದನನಾಮಿನೋಽಭೂತ್
ಕೌಸಲ್ಯಕಾನಾಮ್ನಿ ತದರ್ಥಿತೇಪ್ಸುಃ ॥

'ಕಶ್ಯಪನಿಂದ ಅದಿತಿಯಲ್ಲಿ ಜನಿಸಿದವ ಸೂರ್ಯ. ಅವನ ವಂಶದಲ್ಲಿ ದಶರಥ ಜನಿಸಿದ. ಅವನ ಮಡದಿ ಕೌಸಲ್ಯೆಯಲ್ಲಿ ಶ್ರೀರಾಮ ಅವತರಿಸಿದ' ಎಂದು ಮೇಲು ನೋಟಕ್ಕೆ ಹೇಳಿದಂತಿದೆ. ದಶರಥ ಯಾರ ಅಂಶವೆಂದು ಹೇಳಿದಂತಿಲ್ಲ. ಆದರೆ ವಸುದೇವ ಕಶ್ಯಪನ ಅವತಾರವೆಂದು ನಿರ್ಣಯ ಹೇಳಿದೆ—

ಸ ಕಶ್ಯಪೋ ದ್ರಾಕ್ ಸಹಸಾತಿಗರ್ವಿತಃ...
ಶೂರಾತ್ ಸ ಜಾತೋ ಬಹು ಗೋಧನಾಢ್ಯೋ
ಭೂಮೌ ಯಮಾಹುರ್ವಸುದೇವ ಇತ್ಯಪಿ ॥

'ಕಶ್ಯಪ ಶೂರನ ಮಗನಾಗಿ ವಸುದೇವನಾಮದಿಂದ ಹುಟ್ಟಿ ಬಹು ಗೋಧನ ಸಂಪತ್ತನ್ನು ಹೊಂದಿದ.' ಈ ವಸುದೇವನೆ ಹಿಂದೆ ದಶರಥನಾಗಿ ಹುಟ್ಟಿದ್ದನೆಂದು ಪದ್ಮಪುರಾಣ ಹೇಳಿದೆ ಎಂದ ಮೇಲೆ ದಶರಥ ಕಶ್ಯಪನ ಅವತಾರವೆಂದಂತಾಯಿತು. ಇದು ಶ್ರೀಮದಾಚಾರ್ಯರಿಗೂ ಸಮ್ಮತವೆ. ಸತ್ಯಧರ್ಮರು ಹೇಳುತ್ತಾರೆ—

**'ಸ ಕಶ್ಯಪಸ್ಯಾದಿತಿ ಗರ್ಭಜನ್ಮನೋ ವಿವಸ್ವತ-**
**ಸ್ತಂತು ಭವಸ್ಯ ಭೂಭೃತಃ। ಗೃಹೇ ದಶಸ್ಯಂದನ ನಾಮಮಿನಃ'**

ಎಂಬುದಕ್ಕೆ 'ದಶರಥ ಕಶ್ಯಪ ಅದಿತಿಯರ ಮಗನಾದ ಸೂರ್ಯನ ವಂಶಜ.' ಎಂದೇ ಅರ್ಥ ಹೇಳಬೇಕಾಗಿಲ್ಲ. 'ದಶರಥನೆಂದರೆ ಸೂರ್ಯವಂಶದಲ್ಲಿ ಹುಟ್ಟಿದ ಅದಿತಿಪತಿ ಕಶ್ಯಪನೆ' ಎಂದು ಅರ್ಥಗ್ರಹಿಸಲು ಸಾಧ್ಯವಿದೆ.

ಈಗ ಸಮಸ್ಯೆ ಇನ್ನೂ ಜಟಿಲವಾದಂತಾಯಿತು. ವಾಮನ ಪುರಾಣ ಪ್ರಕಾರ ದಶರಥ ವೈವಸ್ವತ ಮನುವಿನ ಅವತಾರ. ಪದ್ಮಪುರಾಣ ಪ್ರಕಾರ ಪಂಡಿತಾಚಾರ್ಯರೂ ಒಪ್ಪುಂತೆ ದಶರಥ ಸ್ವಾಯಂಭುವ ಮನುವಿನ ಅವತಾರ. ನಿರ್ಣಯ ಪ್ರಕಾರ ಅವನು ಕಶ್ಯಪನ ಅವತಾರ.

ಈ ಸಮಸ್ಯೆಯ ಪರಿಹಾರಕ್ಕೆ ಶ್ರೀಸತ್ಯಧರ್ಮ ತೀರ್ಥರು ಹೀಗೆ ಹೇಳುತ್ತಾರೆ-

'ನಿರ್ಣಯಪ್ರಕಾರ ದಶರಥ ಕಶ್ಯಪನ ಅವತಾರವೆ. ಆದರೆ ಅವನಲ್ಲಿ ವೈವಸ್ವತಮನು ಸ್ವಾಯಂಭುವ ಮನುಗಳ ಅಂಶಗಳೂ ಇವೆ.'

ವಾಲ್ಮೀಕಿ ರಾಮಾಯಣದಲ್ಲಿ ದಶರಥನಿಗೆ 'ಯಥಾ ಮನುಃ' ಎಂದು ಇಬ್ಬರು ಮನುಗಳ ಹೋಲಿಕೆಯನ್ನೂ ಹೇಳಿ 'ಮಹರ್ಷಿಕಲ್ಪೋ ರಾಜರ್ಷಿಃ' 'ಧರ್ಮಜ್ಞಸ್ಯ ವದಾನ್ಯಸ್ಯ ಮಹರ್ಷಿ ಸರ್ಮತೇಜಸಃ' ಎಂದು ಮುಂತಾಗಿ ಅನೇಕಕಡೆ ಮಹರ್ಷಿಯ ಹೋಲಿಕೆಯನ್ನು ನೀಡಿ ಕಶ್ಯಪಮುನಿಯ ಅವತಾರವನ್ನೂ ಒಪ್ಪಿದಂತಿದೆ.

ಹೀಗೆ ಸತ್ಯಧರ್ಮರ ಭಾಗವತ ವ್ಯಾಖ್ಯಾನ ಅನುಪಮ. ಸತ್ಯಧರ್ಮರು-

**'ರಾಮೋ ದ್ವಿರ್ನಾಭಿಭಾಷತೇ'**

ಎಂಬಂತೆ ಸತ್ಯಧರ್ಮ ಪರಿಪಾಲಕನಾದ ರಾಮನ ಉಪಾಸಕರು.

**'ಸತ್ಯೇ ಚ ಧರ್ಮೇ ಚ ರತಃ ಸದೈವ ।'**

ಎಂಬ ಹೆಗ್ಗಳಿಕೆಯ ಮುಖ್ಯಪ್ರಾಣನ ಉಪಾಸಕರು. ಆದರಿಂದ ಅವರು ಸತ್ಯಧರ್ಮರತರಾಗಿದ್ದು ಸತ್ಯಧರ್ಮತೀರ್ಥರೆಂಬ ಸಾರ್ಥಕನಾಮ ಉಳ್ಳವರು. ಅವರು ಸತ್ಯಧರ್ಮ ನಿರತನಾದ ರಾಮನ ಕಥೆಗೆ ವ್ಯಾಖ್ಯಾನ ಬರೆದುದು ಉಚಿತವೇ ಆಗಿದೆ. ಆದರಲ್ಲಿಯೂ ಶ್ರೀಮದಾಚಾರ್ಯರ ನಿರ್ಣಯಾನುಸಾರಿಯಾದ ಏಕೈಕ ರಾಮಾಯಣವ್ಯಾಖ್ಯಾನವನ್ನು ಸತ್ಯಧರ್ಮರು ಒಬ್ಬರೇ ನಮಗೆ ನೀಡಿದ್ದಾರೆ.

**ಸುಂದರಕಾಂಡ ಭಾವದೀಪ**

ಸುಂದರಕಾಂಡ ಭಾವದೀಪದಲ್ಲಿ ಕೆಲವೇ ಉದಾಹರಣೆಗಳನ್ನು ಕಂಡರೂ ಸಾಕು, ಸತ್ಯಧರ್ಮರ ವ್ಯಾಖ್ಯಾನ ಕೌಶಲ ನಮ್ಮನ್ನು ಬೆರಗುಗೊಳಿಸೀತು—

**1. ಮುಷ್ಟಿನಾಭಿಜಘಾನೈನಾಂ ಹನುಮಾನ್ ಕ್ರೋಧ ಮೂರ್ಛಿತಃ । (4-40)**

ಇಲ್ಲಿ 'ಹನುಮಂತ ಕ್ರೋಧದಿಂದ ಮೈಮರೆತು ಲಂಕಿಣಿಯನ್ನು ಮುಷ್ಟಿಯಿಂದ ತಿವಿದ' ಎಂದು ಮೇಲುನೋಟಕ್ಕೆ ಹೇಳಿದಂತೆ ಕಾಣುತ್ತದೆ. ಆದರೆ ಅದರ ಮುಂದಿನ ವಾಕ್ಯ—

**ಸ್ತ್ರೀ ಚೇತಿ ಮನ್ಯಮಾನೇನ ನಾತಿಕ್ರೋಧಃ ಸ್ವಯಂಕೃತಃ (4-41)**

'ಲಂಕಿಣಿ ಹೆಣ್ಣೆಂದು ಅವಳಲ್ಲಿ ಹನುಮಂತ ಹೆಚ್ಚು ಕ್ರೋಧ ಮಾಡಲಿಲ್ಲ.' ಲಂಕಿಣಿ 'ದುರ್ಬುದ್ಧಿ, ವಾನರಾಧಮ' ಎಂದು ಮುಂತಾಗಿ ಕರೆದು ಹನುಮಂತನನ್ನು ಅವಮಾನಿಸುತ್ತಿದ್ದರೂ ಹನುಮಂತ ಕೋಪಗೊಳ್ಳದೆ 'ಭದ್ರೇ!' ಮಂಗಳೆಯೆ ಎಂದು ಮುಂತಾಗಿ ಮಾತನಾಡಿಸುತ್ತಾನೆ. ಈ ವಿರೋಧ ಪರಿಹಾರಕ್ಕೆ ಸತ್ಯಧರ್ಮರು ಹೇಳುತ್ತಾರೆ— 'ಕ್ರೋಧಮೂರ್ಛಿತಃ' ಎಂದರೆ ಅವನು ಕ್ರೋಧದಿಂದ ಮೂರ್ಛಿತ ನಲ್ಲ. ಕ್ರೋಧ ಅವನಲ್ಲಿ ಮೂರ್ಛಿತವಾಗಿತ್ತು, ಎಚ್ಚತ್ತಿರಲಿಲ್ಲ ಎಂದು ಬಹುವ್ರೀಹಿ ಸಮಾಸವಿಟ್ಟುಕೊಳ್ಳಬೇಕು!

2. ಹನುಮಂತ ಲಂಕೆಯನ್ನು ಪ್ರವೇಶಿಸಿದಾಗ ರಾತ್ರಿಯಾಗಿತ್ತು. ಆಗ ತಾನೆ ಚಂದ್ರ ಉದಿಸುತ್ತಿದ್ದ. ಚಂದ್ರೋದಯವನ್ನು ವರ್ಣಿಸುತ್ತ ವಾಲ್ಮೀಕಿ ಹೇಳುತ್ತಾನೆ—

**ತತಃ ಸ ಮಧ್ಯಂಗತಮಂಶುಮಂತಂ**
**ಜ್ಯೋತ್ಸ್ನಾವಿತಾನಂ ಮುಹುರುದ್ವಮಂತಂ ।**
**ದದರ್ಶ ಧೀಮಾನ್ ದಿವಿ ಭಾನುಮಂತಂ**
**ಗೋಷ್ಠೇ ವೃಷಂ ಮತ್ತಮಿವ ಭ್ರಮಂತಂ ॥ (5-1)**

'ಚಂದ್ರ ಆಗಸದಲ್ಲಿ ಬೆಳದಿಂಗಳು ಚೆಲ್ಲುತ್ತ ಕೊಟ್ಟಿಗೆಯಲ್ಲಿ ಚಲಿಸುವ ಗೂಳಿಯಂತೆ ಚಲಿಸುತ್ತಿದ್ದುದನ್ನು ಹನುಮಂತ ಕಂಡ.'

ಇಲ್ಲಿ ಚಂದ್ರನನ್ನು 'ಅಂಶುಮಾನ್' 'ಭಾನುಮಾನ್' ಎಂದು ವಿಶೇಷಣ ಕೊಟ್ಟು ವರ್ಣಿಸಲಾಗಿದೆ. ಇದು ಕೋಶವಿರುದ್ಧ. 'ಕೋಶಪ್ರಕಾರ ಆ ಎರಡೂ ಶಬ್ದಗಳು ಸೂರ್ಯವಾಚಕವಾಗಿವೆ. ಸತ್ಯಧರ್ಮರು ಹೇಳುತ್ತಾರೆ, ರೂಢಿಯಿಂದ ಸೂರ್ಯನಿಗೆ ಸಲ್ಲುವ ಶಬ್ದಗಳು ಯೋಗದಿಂದ ಚಂದ್ರನಿಗೂ ಸಲ್ಲಬಹುದು. ಅಂಶು ಎಂದರೆ

ಕಿರಣ. ಭಾನು ಎಂದರೆ ಪ್ರಕಾಶ. ತಂಪು ಕಿರಣದವ, ಒಳ್ಳೆಯ ಪ್ರಕಾಶದವ ಚಂದ್ರನಾಗಬಹುದು. ವಸ್ತುತಃ ರೂಢ್ಯರ್ಥವೆ ಕವಿಗೆ ಸಂಮತವಾಗಬಹುದು. ಏಕೆಂದರೆ ಲಂಕೆಯಲ್ಲಿ ಸೀತೆ, ಕಿಷ್ಕಿಂಧೆಯಲ್ಲಿ ರಾಮ ಇಬ್ಬರೂ ಪರಸ್ಪರ ವಿಯೋಗ ದಿಂದ ವಿರಹೋದ್ದೀಪಕವಾದ ತಂಪಾದ ಕಿರಣವನ್ನು ಬಿಸಿಲೆಂದು ಗ್ರಹಿಸುತ್ತಾರೆ ಎಂದುಕೊಳ್ಳುತ್ತಾನೆ ಹನುಮಂತ!

3. ಬಭೂವ ಬುದ್ಧಿಸ್ತು ಹರೀಶ್ವರಸ್ಯ
ಯದೀದೃಶೀ ರಾಘವ ಧರ್ಮಪತ್ನೀ ।
ಇಮಾ ಯಥಾ ರಾಕ್ಷಸರಾಜ ಭಾರ್ಯಾಃ
ಸುಜಾತಮಸ್ಯೇತಿ ಹಿ ಸಾಧುಬುದ್ಧೇಃ ॥

ಪುನಶ್ಚ ಸೋಚಿಂತಯದಾರ್ತರೂಪೋ
ಧ್ರುವಂ ವಿಶಿಷ್ಟಾ ಗುಣತೋ ಹಿ ಸೀತಾ।
ಅಥಾಯಮಸ್ಯಾಂ ಕೃತವಾನ್ ಮಹಾತ್ಮಾ
ಲಂಕೇಶ್ವರಃ ಕಷ್ಟಮನಾರ್ಯಕರ್ಮ ॥ (9-73, 74)

ರಾವಣನ ಅಂತಃಪುರದಲ್ಲಿ ನಡುರಾತ್ರಿ ಮದ್ಯಪಾನ ಮಾಡಿ ಅಸ್ತವ್ಯಸ್ತವಾಗಿ ಮಲಗಿ ನಿದ್ದೆಹೋಗಿದ್ದ ಸ್ತ್ರೀಯರನ್ನು ಕಂಡು ಹನುಮಂತ ತನಗೆ ತಾನೇ ಹೇಳಿಕೊಳ್ಳುವ ಮಾತು— 'ಶ್ರೀರಾಮನ ಧರ್ಮಪತ್ನಿಯೂ ಇಲ್ಲಿ ಇವರೊಂದಿಗೇ ಇದೇ ರೀತಿ ಇರುವುದಾದರೆ ರಾವಣನ ಜನ್ಮ ಸಾರ್ಥಕವಾಯಿತು.' ಪುನಃ ದುಃಖಿತನಾಗಿ ಹೇಳಿಕೊಂಡ, 'ಸೀತೆ ಒಳ್ಳೆಯ ಶೀಲವತಿ. ಅವಳಲ್ಲಿ ರಾವಣ ಇಂಥ ದುರ್ವರ್ತನೆ ಮಾಡುವನೆಂದರೆ ನಮಗೆ ಬಲು ಕಷ್ಟವಾಯಿತಲ್ಲ!' — ಇದು ಮೇಲು ನೋಟಕ್ಕೆ. ಶ್ರೀಮದಾಚಾರ್ಯರ ನಿರ್ಣಯದ ಬೆಳಕಿನಲ್ಲಿ ಸತ್ಯಧರ್ಮರ ಅಂತರ್ದೃಷ್ಟಿಗೆ ಕಾಣುವ ಅರ್ಥ ಬೇರೆಯೇ ಇದೆ. ರಾವಣನಲ್ಲಿರುವ ಜೀವದ್ವಯಾವೇಶ ಮತ್ತು ಅದರ ಪರಿಣಾಮಗಳ ಚಿತ್ರಣವಿದೆ ಇಲ್ಲಿ. ಮತ್ತು ಈ ಅರ್ಥ ಸ್ವಾರಸ್ಯಕರವೂ ಆಗಿದೆ—

ಮೊದಲನೆ ಶ್ಲೋಕ ಹೇಳುತ್ತದೆ— 'ರಾವಣ ಸತ್ತು ಅವನಲ್ಲಿರುವ ಸಾತ್ವಿಕ ಜೀವ ತನ್ನ ಮೂಲರೂಪವನ್ನು ಸೇರಲು ದಾರಿ ಮಾಡಿಕೊಡಬಲ್ಲ ಉತ್ತಮವಾದ ಶಿಶುಪಾಲ ಜನ್ಮ ಪಡೆಯುವುದು ನಿಶ್ಚಿತ.'

ಎರಡನೆ ಶ್ಲೋಕ ಹೇಳುತ್ತದೆ— 'ರಾವಣನಲ್ಲಿರುವ ತಾಮಸ ಜೀವ ದುಃಖಿತನಾಗುತ್ತಾನೆ, ತಮಸ್ಸಿನಲ್ಲಿ ಶಾಶ್ವತವಾಗಿ ಪಂಚಕಷ್ಟವೆಂಬ ಹೆಸರಿನ ದುಃಖ ಹೊಂದುತ್ತಾನೆ.

ಮಹೇಶ್ವರ ತೀರ್ಥೀಯ ವ್ಯಾಖ್ಯಾನದಲ್ಲಿ ಏಳೆಂಟು ಬಗೆಯ ವಿವರಣೆಗಳಿವೆ. ಯಾವುದೂ ಇಷ್ಟು ಸ್ವಾರಸ್ಯಕರವಾಗಿಲ್ಲ.

4. ವಜ್ರೋಲ್ಲಿಖಿತ ಪೀನಾಂಸೌ ವಿಷ್ಣುಚಕ್ರಪರಿಕ್ಷತೌ (10-16)

'ರಾವಣನ ಪುಷ್ಟವಾದ ಭುಜಗಳಲ್ಲಿ ವಜ್ರಾಯುಧದ ಏಟಿನ ಚಿಹ್ನೆ ಇದೆ. ವಿಷ್ಣುಚಕ್ರದಿಂದಾದ ಗಾಯದ ಚಿಹ್ನೆಯೂ ಇದೆ.' ಇಲ್ಲಿ ರಾವಣ ವಜ್ರಾಯುಧದ ಏಟನ್ನೂ ಸಹಿಸಿಕೊಂಡಿದ್ದಾನೆ ಬ್ರಹ್ಮನ ವರಬಲದಿಂದ ಎಂದರೆ ತಪ್ಪಿಲ್ಲ. ಆದರೆ ವಿಷ್ಣುಚಕ್ರವನ್ನೂ ಇದಿರಿಸಿ ಇನ್ನೂ ಬದುಕಿ ಉಳಿದಿದ್ದಾನೆ ಎಂದರೆ ಅಸಂಗತ. ಅದಕ್ಕೆ ಸತ್ಯಧರ್ಮರು ಹೇಳುತ್ತಾರೆ— 'ವಿಷ್ಣುಚಕ್ರ' ಇಲ್ಲಿ ವಿಷ್ಣುವಿನ ಸುದರ್ಶನ ಚಕ್ರವಲ್ಲ. ವಿಷ್ಣು ಎಂದರೆ ಉಪೇಂದ್ರ ಮೂರ್ತಿಯಾದ ಹರಿ. ಇಂದ್ರನ ತಮ್ಮನಾಗಿ ಅವತರಿಸಿ ಸ್ವರ್ಗದಲ್ಲಿ ನೆಲೆಸಿದವ. ಅವನ 'ಚಕ್ರ' ಎಂದರೆ ಸೈನ್ಯ. ಅಂದರೆ ದೇವತೆಗಳ ಸೈನ್ಯ ರಾವಣನೊಡನೆ ಹೋರಾಡಿತು. ರಾವಣ ಸೋಲಲಿಲ್ಲ. ಅವನ ಮೈಯಲ್ಲಿ ಗಾಯಗಳು ಮಾತ್ರ ಉಂಟಾದುವು. ಅವುಗಳ ಚಿಹ್ನೆ ರಾವಣನ ವಿಜಯದ ಚಿಹ್ನೆಗಳಾಗಿ ರಾರಾಜಿಸುತ್ತಿವೆ.'

5. ಕಿಂ ನು ಸೀತಾಥ ವೈದೇಹೀ ಮೈಥಿಲೀ ಜನಕಾತ್ಮಜಾ ।
ಉಪತಿಷ್ಠೇತ ವಿವಶಾ ರಾವಣೇನ ಹೃತಾ ಬಲಾತ್ ॥ (13-6)

'ಸೀತೆ, ವೈದೇಹಿ, ಮೈಥಿಲಿ, ಜನಕಾತ್ಮಜೆ, ರಾವಣನ ಬಲಾತ್ಕಾರಕ್ಕೆ ಮಣಿದು ಅವನನ್ನು ಸೇರುವಳೇನು? ಇಲ್ಲ'— ಇಲ್ಲಿ ಸೀತೆ ಎಂದು ಒಂದು ಹೆಸರು ಸಾಕಾಗದೆ? ಎಲ್ಲ ಹೆಸರುಗಳನ್ನು ಹೇಳಿದರೆ ಪುನರುಕ್ತಿಯಲ್ಲವೆ? ಸತ್ಯಧರ್ಮರು ಹೇಳುತ್ತಾರೆ— 'ಸೀತೆ' ಎಂದರೆ ನೇಗಿಲ ತುದಿಯಿಂದ ಎದ್ದು ಬಂದವಳು, ಅಂದರೆ ಅಯೋನಿಜೆ, ಎಲ್ಲರಂತಲ್ಲ. 'ವೈದೇಹಿ' ಎಂದರೆ ವಿದೇಹನಾದ ದೇಹಾಭಿಮಾನ ರಹಿತನಾದ ನಿಮಿ ರಾಜನ ವಂಶದಲ್ಲಿ ಬಂದವಳು. ದೇಹಾಭಿಮಾನದಿಂದ ಪರಪುರುಷನನ್ನು ಸೇರುವವಳಲ್ಲ. 'ಜನಕಾತ್ಮಜೆ' ಜನಕ ಮಹಾತತ್ವಜ್ಞಾನಿ ಎಂದು ಪ್ರಸಿದ್ಧ. ಅವನ ಮಗಳೆಂದ ಮೇಲೆ ಮುಗ್ಧಮಾನವಳಂತೆ ಕಾಮೋಪಭೋಗಕ್ಕೆ ಮನಸ್ಸು ಮಾಡಳು. 'ಮೈಥಿಲಿ' ಮಿಥಿಲಾ ಎಂದರೆ ಆ ನಗರದ ಸಾಮಾನ್ಯ ಪ್ರಜೆಗಳೂ ಕಾಮಾದಿ ಅಂತಃಶತ್ರುಗಳನ್ನು ಮಥಿಸಿ ನಾಶಪಡಿಸಿಕೊಳ್ಳುವವರು. ಇಂಥ ನಗರದವಳು ಸೀತೆ ಕಾಮಾದಿ ಉಪದ್ರವಗಳಿಗೆ ಈಡಾಗುವಳೆ? ಹೀಗೆ ಎಲ್ಲ ಹೆಸರುಗಳೂ ಬೇರೆ ಬೇರೆ ವಿಶೇಷ ಅರ್ಥಗಳನ್ನು ಧ್ವನಿಸುವುದರಿಂದ ಪುನರುಕ್ತಿ ಇಲ್ಲ.

6. ರಾವಣಶ್ಚ ಮಯಾ ದೃಷ್ಟೋ ಮುಂಡಸ್ತೈಲ ಸಮುಕ್ಷಿತಃ ।
ರಕ್ತವಾಸಾಃ ಪಿಬನ್ ಮತ್ತಃ ಕರವೀರ ಕೃತಸ್ರಜಃ ॥ (27-35)

ತ್ರಿಜಟೆ ರಾವಣನ ಮರಣಸೂಚಕವಾದ ಸ್ವಪ್ನ ಕಂಡಳು— 'ರಾವಣ ಎಣ್ಣೆ ಬಳಿದುಕೊಂಡು ಕುಡಿದು ಮತ್ತನಾಗಿ, ಕೆಂಪು ಬಟ್ಟೆ ಉಟ್ಟು ಕರವೀರ ಕೃತಸ್ರಜನಾಗಿ ಪುಷ್ಪಕ ವಿಮಾನದಿಂದ ನೆಲಕ್ಕೆ ಬಿದ್ದ.'

ಇಲ್ಲಿ ಕುಡಿದು ಎಂದರೆ ಏನನ್ನು ಕುಡಿದು? ಹಿಂದೆ ಹೇಳಿದ ಎಣ್ಣೆಯನ್ನು ಕುಡಿದು ಎಂದರ್ಥ. ಅಥವಾ ಅಪಶಕುನ, ಸೂಚಕವಾದ ಪೇಯವನ್ನೆಲ್ಲ ಕುಡಿದು ಎಂದರ್ಥ. 'ಕರವೀರ ಕೃತಸ್ರಜಃ' ಕರವೀರ ಪುಷ್ಪಮಾಲೆಗಳಿಂದ ಕೂಡಿದ ವಿಮಾನದಿಂದ ರಾವಣ ಬಿದ್ದನೆಂದು ಮೇಲುನೋಟಕ್ಕೆ ಕಾಣುತ್ತದೆ. ಆದರೆ ರಾವಣ ತಾನೆ ಕೆಂಪು ಕರವೀರ ಮಾಲೆ ಧರಿಸಿದಂತೆ ಕನಸಿನಲ್ಲಿ ಕಂಡರೆ ಬಹಳ ಅಪಶಕುನವಾಗು ತ್ತಿತ್ತು. ಮುಂದಿನ ಶ್ಲೋಕದಲ್ಲಿ ಸ್ಪಷ್ಟವಾಗಿ 'ರಕ್ತಮಾಲ್ಯಾನುಲೇಪನಃ' ಎಂದೂ ಹೇಳಿದೆ. ಆದಕ್ಕೆ 'ಸ್ರಜಃ' ಎಂದು 'ಸ್ರಕ್' ಶಬ್ದದ ಷಷ್ಠ್ಯಂತವಲ್ಲ! 'ಸ್ರಜಾ' ಎಂಬ ಆಕಾರಾಂತ ಶಬ್ದ ಸಮಾಸದಲ್ಲಿ ಹ್ರಸ್ವಗೊಂಡು ಪ್ರಥಮಾಂತವಾಗಿ ರಾವಣನಿಗೆ ವಿಶೇಷಣವಾಗಿದೆ ಎನ್ನಬೇಕು.

ಹಲಂತವಾದ 'ಸ್ರಜ್' ಮುಂತಾದ ಸ್ತ್ರೀಲಿಂಗ ಶಬ್ದಗಳು ಆಬಂತವಾಗುವುದು ಭಾಗುರಿಮತ. ಅದನ್ನು ಶಬ್ದೇಂದು ಶೇಖರದಲ್ಲಿ ನಾಗೋಜಿ ಭಟ್ಟ ನಿರಾಕರಿಸಿದ್ದಾನೆ ಎಂದು ಆಕ್ಷೇಪ ಬಂದರೆ ಸತ್ಯಧರ್ಮರು ಹೇಳುತ್ತಾರೆ— 'ಬಹುಪ್ರಯೋಗ ವಿಪ್ಲವಾಪತ್ತೇಃ ಸಾಹಸಮಾತ್ರಂ ತದಿತ್ಯವಧೇಯಂ' ಬಹು ಶಿಷ್ಟ ಪ್ರಯೋಗಗಳು ಅಸಾಧುವೆನಿಸುವ ಪ್ರಸಂಗ ಬರುವುದರಿಂದ ನಾಗೋಜಿ ಭಟ್ಟನದು ಏನೂ ವಿಚಾರ ಮಾಡದೆ ಅವಸರದಿಂದ ಹೇಳಿದ ಮಾತು ಎನ್ನಬೇಕು.'— ಹೀಗೆ ವ್ಯಾಕರಣಶಾಸ್ತ್ರ ವನ್ನೂ ತಿದ್ದುವ ಸರ್ವತೋಮುಖ ಪಾಂಡಿತ್ಯವನ್ನು ಇಲ್ಲಿ ಕಾಣಬಹುದು.

7. ಹರ್ಷೇಣಾಪೂರ್ಯಮಾಣೋऽಸೌ ರಮ್ಯೇ ಪರ್ವತ ನಿರ್ಝರೇ ।
ಛಿನ್ನಪಕ್ಷ ಇವಾಕಾಶಾತ್ ಪಪಾತ ಧರಣೀಧರಃ (57-31)

'ಆನಂದ ತುಂದಿಲನಾದ ಹನುಮಂತ ರಮ್ಯವಾದ ಪರ್ವತ ಜಲಪಾತ ಪ್ರದೇಶ ದಲ್ಲಿ ರೆಕ್ಕೆ ಕಡಿದ ಬೆಟ್ಟದಂತೆ ಆಕಾಶದಿಂದ ಬಿದ್ದ.'— ಇದು ಮೇಲುನೋಟಕ್ಕೆ ಕಾಣುವ ಅರ್ಥ. ಆದರೆ ರೆಕ್ಕೆಕಡಿದ ಬೆಟ್ಟದ ದೃಷ್ಟಾಂತ ಹನುಮಂತನಿಗೆ ಉಚಿತವಾಗುವುದೆ? ಹನುಮಂತ ಆನಂದತುಂದಿಲನಾದರೆ ರೆಕ್ಕೆ ಬಂದಂತಾಗುತ್ತದೆ, ಕಡಿದಂತಲ್ಲ, ತಾನು ಬಯಸಿದ ರಮ್ಯ ಪ್ರದೇಶದಲ್ಲಿಯೆ ಬಂದಿಳಿಯಬೇಕಾದರೂ

ರೆಕ್ಕೆ ಬೇಕಾಗುತ್ತದೆ, ಮತ್ತು ರೆಕ್ಕೆ ಕಡಿಯುವುದು ಪರಾಜಯದ ಸಂಕೇತ. ಕಾರ್ಯದಲ್ಲಿ ಪೂರ್ಣವಿಜಯಿಯಾಗಿ ಬಂದ ಹನುಮಂತನ ವಿಷಯದಲ್ಲಿ ಅದು ಸರ್ವಥಾ ಅನುಚಿತ. ಆದಿಕವಿ ವಾಲ್ಮೀಕಿ ಇಂಥ ಉಪಮೆ ನೀಡುವನೆಂದರೆ ನಂಬಲಾಗದು. ಆದರಿಂದ 'ಛಿನ್ನಪಕ್ಷ' 'ಅಚ್ಛಿನ್ನ ಪಕ್ಷ'ವಾಗಬೇಕು, ಹೇಗೆ?

'ಸಂಭೂತಿಂ ಚ ವಿನಾಶಂ ಚ ಯಸ್ತದ್ ವೇದೋಭಯಂ ಸಃ ।'

ಎಂಬ ಈಶೋಪನಿಷತ್ತಿನ ವಾಕ್ಯದಲ್ಲಿ ಶಾಂಕರ ಭಾಷ್ಯ ಹೇಳುತ್ತದೆ—

'ಸಂಭೂತಿಂ ಚ ವಿನಾಶಂ ಚೇತ್ಯತ್ರಾವರ್ಣ
ಲೋಪೇನ ನಿರ್ದೇಶೋ ದ್ರಷ್ಟವ್ಯಃ'

'ಅಕಾರಲೋಪಮಾಡಿ 'ಅಸಂಭೂತಿ'ಯನ್ನೆ 'ಸಂಭೂತಿ' ಎಂದಿದೆ ಉಪನಿಷತ್ತು.' ಹಾಗೇ ಇಲ್ಲಿಯೂ ಗ್ರಹಿಸಬಹುದೆ? ಸತ್ಯಧರ್ಮರು ಒಪ್ಪುವುದಿಲ್ಲ. 'ಛಿನ್ನಪಕ್ಷ' ಶಬ್ದದಿಂದಲೆ 'ಅಚ್ಛಿನ್ನಪಕ್ಷ' ಎಂಬ ಅರ್ಥವನ್ನು ತೆಗೆದು ತೋರಿಸುತ್ತಾರೆ!

ಛಿತ್ ಛಿದಾ ನ ಯಯೋಸ್ತೌ ಛಿನ್ನೌ। ನಶಬ್ದೋ ನಿಷೇದಾರ್ಥಕಃ ।
ತಸ್ಯ ಛಿಚ್ಛಬ್ದಾನಂತರತ್ವಂ ಜನ ಇತ್ಯಾದಿವದ್ ಬೋಧ್ಯಂ । ತತಶ್ಚ
ಛಿನ್ನೌ ಅಚ್ಛಿನ್ನೌ ಪಕ್ಷೌ ಯಸ್ಯ ಸಃ ॥

ಹೀಗೆ ಅಚ್ಛಿನ್ನಪಕ್ಷ ಪರ್ವತ ದೃಷ್ಟಾಂತವನ್ನು ಸಮರ್ಥಿಸಿ ಹನುಮಂತನ ಪಕ್ಷವೆಂದೂ ಅಚ್ಛೇದ್ಯ ಅಭೇದ್ಯವೆಂದು ಸಾಧಿಸಿ ತೋರಿಸಿದ್ದಾರೆ ಸತ್ಯಧರ್ಮರು.

'ಅಚ್ಛಿನ್ನಪಕ್ಷವಾದ ಪರ್ವತ ಬೀಳುವುದು ಹೇಗೆ? ಅದಕ್ಕೆ ಛಿನ್ನಪಕ್ಷ ಎನ್ನ ಲಾಗಿದೆ' ಎನ್ನುತ್ತದೆ ಗೋವಿಂದರಾಜೀಯ ಟೀಕೆ!

**ಶ್ರೀಸತ್ಯಧರ್ಮರ ಪೀಠಾರೋಹಣ:**

ಸವಣೂರಿನ ಶ್ರೀ ನವರತ್ನ ಪುರುಷೋತ್ತಮಾಚಾರ್ಯರು (ಅಣ್ಣಯಾಚಾರ್ಯರು) ಒಮ್ಮೆ ಪ್ರಾತಃ ಸ್ನಾನಕ್ಕೆ ತೀರ್ಥವೊಂದರ ಬಳಿಗೆ ಹೋಗಿದ್ದಾಗ ಅಲ್ಲಿ ಶ್ರೀ ಉತ್ತರಾದಿ ಮಠದ ಸಂಸ್ಥಾನದ ಶ್ರೀ ಮೂಲರಾಮ ಪ್ರತಿಮೆಗಳು ದೊರಕಿದುವು. ಅವುಗಳನ್ನು ಯಾರೋ ದುಷ್ಕರ್ಮಿಗಳು ಕಳವು ಮಾಡಿದ್ದರು. ಶ್ರೀರಾಮ ದೊರಕುವವರೆಗೂ ಭಿಕ್ಷೆ ಸ್ವೀಕರಿಸೆನೆಂದು ಪ್ರಾಯೋಪವೇಶವನ್ನೆ ಕೈಗೊಂಡಿದ್ದರು, ಆಗಿನ ಸಂಸ್ಥಾನಾಧಿಪತಿಗಳಾಗಿದ್ದ ಶ್ರೀ ಸತ್ಯವರ ತೀರ್ಥರು.

ಇಪ್ಪತ್ತೊಂದು ದಿವಸಗಳ ಕಾಲ ಕಠೋರ ತಪಸ್ಸು ಮಾಡಿದ್ದರು. ಇಪ್ಪತ್ತೆರಡನೆ ದಿವಸ ಶ್ರೀ ಪುರುಷೋತ್ತಮಾಚಾರ್ಯರಿಗೆ ಶ್ರೀರಾಮ ಒಲಿದು ದರ್ಶನವಿತ್ತ. ಈ ಶುಭ ಸಮಾಚಾರ ತಿಳಿದು ತಮ್ಮ ಸಂಸ್ಥಾನಕ್ಕೆ ಉತ್ತರಾಧಿಕಾರಿಯನ್ನಾಗಿ ಆಚಾರ್ಯರನ್ನೆ ಆಯ್ಕೆ ಮಾಡಿದರು ಶ್ರೀಗಳವರು. ಒಂದು ಶುಭಮುಹೂರ್ತದಲ್ಲಿ (ಕ್ರಿ.ಶ. 1797 ಪಿಂಗಳ ಸಂವತ್ಸರದ ಶ್ರಾವಣ ಶುದ್ಧ ಪಂಚಮೀ) ಆಚಾರ್ಯರನ್ನು ಶ್ರೀಸರ್ವಜ್ಞ ಪೀಠದಲ್ಲಿ ಕೂಡಿಸಿ ಪಟ್ಟಾಭಿಷೇಕಗೈದು ಶ್ರೀ ಸತ್ಯಧರ್ಮ ತೀರ್ಥರೆಂದು ನಾಮಕರಣ ಮಾಡಿದರು.

**ಪೂರ್ವಾಶ್ರಮದಲ್ಲಿ ಗ್ರಂಥರಚನೆ:**

ಇವರು ಶ್ರೀ ಸತ್ಯಬೋಧ ಸ್ವಾಮಿಗಳ ಪ್ರಿಯಶಿಷ್ಯರಾಗಿದ್ದರು. ಶ್ರೀಸತ್ಯ ಬೋಧರ ಅನಂತರ ಶ್ರೀ ಸತ್ಯಸಂಧರು ಪೀಠವನ್ನಲಂಕರಿಸಿದರು. ಅವರ ಬಳಿಕ ಶ್ರೀ ಸತ್ಯವರರು. ಇವರಿಬ್ಬರ ವಿಶೇಷಾನುಗ್ರಹಕ್ಕೆ ಪಾತ್ರರಾಗಿದ್ದ ಮಹಾವಿದ್ವಾಂಸ ರಾಗಿದ್ದ ಆಚಾರ್ಯರು ಸಂಸ್ಥಾನಾಧಿಪತ್ಯ ವಹಿಸಿಕೊಂಡ ಮೇಲೆ ಪಾಠಪ್ರವಚನ ವಾದಿನಿಗ್ರಹ ಗ್ರಂಥರಚನೆಗಳಿಂದ ದೇಶದಲ್ಲೆಲ್ಲ ಬಹಳ ಕೀರ್ತಿಗಳಿಸಿದರು. ಇವರ ಪಾಠ ಪ್ರವಚನ ಕೌಶಲಕ್ಕೆ ಬೆರಗಾಗಿ ಕಾಶಿಯ ಪ್ರಖ್ಯಾತಪಂಡಿತರಾಗಿದ್ದ ಕಾಶೀ ತಿಮ್ಮಣ್ಣಾಚಾರ್ಯರು ಬಂದು ಸುಧಾಧ್ಯಯನ ಮಾಡಿದರಂತೆ.

ಗ್ರಂಥಕಾರರಾಗಿ ಶ್ರೀ ಸತ್ಯಧರ್ಮತೀರ್ಥರ ಸ್ಥಾನ ಬಹುಮುಖ್ಯವಾದುದು. ಶಾಸ್ತ್ರಪಾಂಡಿತ್ಯ ಕಾವ್ಯಪ್ರತಿಭೆಗಳೆರಡರಲ್ಲಿಯೂ ಇವರು ಸವ್ಯಸಾಚಿಗಳು. ಗಂಗಾಲಹರಿ ಕವಿಕಂಠಮಣಿ ಮತ್ತು ನಾನಾ ಸುಭಾಷಿತಗಳು ಅವರ ಕಾವ್ಯಪ್ರತಿಭೆಗೆ ಉಜ್ವಲ ನಿದರ್ಶನಗಳು. ರಾಮಾಯಣ ಭಾರತ ಭಾಗವತ ಟಿಪ್ಪಣಿಗಳು ನಮಕ ಚಮಕ ವ್ಯಾಖ್ಯಾನ ಮುಂತಾದುವು ಶಾಸ್ತ್ರ ಪಾಂಡಿತ್ಯಕ್ಕೆ ಜ್ವಲಂತ ಸಾಕ್ಷಿಯಾಗ ಬಲ್ಲುವು. ಸುಮಾರು ಮೂವತ್ತೈದು ಕೃತಿಗಳನ್ನು ರಚಿಸಿ ಹತ್ತೊಂಬತ್ತನೆ ಶತಮಾನದ ಶ್ರೇಷ್ಠ ಗ್ರಂಥಕಾರರೆಂಬ ಮನ್ನಣೆಗೆ ಪಾತ್ರರಾದವರು ಶ್ರೀ ಸತ್ಯಧರ್ಮರು.

ಪ್ರೌಢಶೈಲಿಯ ಯಮಕಮಯವಾದ ಗದ್ಯಪದ್ಯಗಳನ್ನು ಹೊಸೆಯುವುದರಲ್ಲಿ ಸಿದ್ಧಹಸ್ತರು. ಅವರ ಮಾತು ವಿದ್ವತ್ಪೂರ್ಣ ಸರಸ ಕಾವ್ಯಮಯವಾಗಿಯೆ ಹೊರಹೊಮ್ಮುತ್ತಿದ್ದುವು. ಉದಾ: 'ಅಸ್ತ್ರ ಪಾಶೈರ್ನ ಶಕ್ಯೋಽಹಂ' (ವಾ.ರಾ.ಸಂ. 50-16) ಎಂಬ ಶ್ಲೋಕಕ್ಕೆ ಅವರು ಅವತಾರಿಕೆ ನೀಡುವಾಗ ಆಯತ್ನವಾಗಿ ತನ್ನಿಂದ ತಾನೇ ಅರ್ಧಶ್ಲೋಕ ರೂಪವಾಗಿ ಆ ಅವತಾರಿಕೆ ಅವತರಿಸಿದೆ—

ನ ಬ್ರಾಹ್ಮಮಸ್ತ್ರಂ ಮಮ ಬಂಧಕಂ ಸ್ಯಾತ್
ಮಾ ಕೌತುಕಂ ತೇ ಸುತವಿಕ್ರಮೇ ಸ್ಯಾತ್ ॥

ಕಳೆದುಹೋದ ಶ್ರೀಮೂಲರಾಮನನ್ನು ತಿರುಗಿ ತಂದ ಶ್ರೀಗಳೆ ರಾಮಾಯಣದಲ್ಲಿ ಅಪವ್ಯಾಖ್ಯಾನಗಳಿಂದ ಮರೆಯಾಗಿ ಹೋಗಿದ್ದ ಸತ್ಸಿದ್ಧಾಂತ ರಹಸ್ಯಪ್ರಮೇಯಗಳನ್ನು ಎತ್ತಿ ತೋರಿಸುವ 'ಭಾವದೀಪ'ವೆಂಬ ನಂದಾದೀಪ ಹಚ್ಚಿಟ್ಟರು. ಅದರ ಬೆಳಕಿನಲ್ಲಿ ಶ್ರೀರಾಮನ ದಿವ್ಯದರ್ಶನ ಎಲ್ಲ ಸಜ್ಜನರಿಗೂ ಲಭ್ಯವಾಗುವಂತಾಯಿತು.

ಸುಂದರಕಾಂಡ ಭಾವದೀಪದ ಆರಂಭದ ಮಂಗಳಾಚರಣೆ ಶ್ರೀಗಳ ಯಮಕ ಶೈಲಿಗೆ ಒಂದು ಉತ್ತಮ ನಿದರ್ಶನವಾಗಬಹುದು—

ಆರಾಮ ಧಾಮ ಶ್ರೀರಾಮ ರಾಮಾಂ ದ್ರಷ್ಟುಂ ಗತೋಂಬುಧೇಃ ।
ಪಾರಂ ಸ ಪಾರಯೇದೇತತ್‌ಕಾಂಡ ಕಾಂಡನಿಧಿಂ ಮಯಾ ॥

'ಆನಂದದ ತವರೆನಿಸಿದ ಶ್ರೀರಾಮನ ರಮಣಿಯನ್ನು ಕಾಣಲು ಸಮುದ್ರದ ಆಚೆ ದಡವನ್ನು ಸೇರಿದ ಹನುಮಂತನೇ ನನ್ನನ್ನೂ ಈ ಸುಂದರಕಾಂಡವೆಂಬ ಸಮುದ್ರದ ಆಚೆ ದಡ ಸೇರಿಸಲಿ.'

ಸುಂದರ ಪ್ರೌಢಗ್ರಂಥವಾದ ಈ ಸುಂದರಕಾಂಡ ಭಾವದೀಪದ ಸಂಪಾದನ ಕಾರ್ಯ ಬಹು ಕ್ಲಿಷ್ಟವಾಗಿತ್ತು. ಹಸ್ತಪ್ರತಿ ಬಹಳ ಅಶುದ್ಧಮಯ. ನೇರವಾಗಿ ಓದಿಸಿಕೊಳ್ಳದೆ ಪ್ರತಿ ಶಬ್ದವನ್ನೂ ಅಕ್ಷರವನ್ನೂ ಸಂದರ್ಭಾನುಗುಣ ಊಹೆಗೇ ಬಿಡುತ್ತಿತ್ತು. ಒಂದರಿಂದ ಐವತ್ತರವರೆಗಿನ ಅಧ್ಯಾಯಗಳವರಗೆ ಡಾ|| ವ್ಯಾಸನಕೆರೆ ಪ್ರಭಂಜನಾಚಾರ್ಯರ ಸಂಗ್ರಹದ ಏಕಮಾತ್ರ ಹಸ್ತಪ್ರತಿ ಇತ್ತು. ಇದರಲ್ಲಿ ಮೂಲಶ್ಲೋಕವಿರಲಿಲ್ಲ. ಬೇರೆ ಉಪಲಬ್ಧವಿದ್ದ ಮೂಲಶ್ಲೋಕ ಪಾಠ ಭಾಪದೀಪಕ್ಕೆ ಅನುಗುಣವಿರಲಿಲ್ಲ. ಶ್ಲೋಕ ಸಂಖ್ಯೆಯೂ ಹೊಂದಿಕೆಯಾಗುತ್ತಿರಲಿಲ್ಲ. ತಿದ್ದಿಕೊಳ್ಳಬೇಕಾಯಿತು. ಐವತ್ತೊಂದರಿಂದ ಮುಂದಿನ ಅಧ್ಯಾಯಗಳಿಗೆ ಮೈಸೂರಿನ ಪ್ರಾಚ್ಯವಿದ್ಯಾಸಂಸ್ಥೆಯ ಏಕಮಾತ್ರ ಹಸ್ತಪ್ರತಿ. ಇದರಲ್ಲಿ ಮೂಲಶ್ಲೋಕಗಳಿದ್ದರೂ ಅಶುದ್ಧಿ ಬಹಳ. ಆದರಿಂದ ಈ ಸಂಪಾದನ ಕಾರ್ಯ ಕೈಗೂಡಿದುದು 'ಸಮುದ್ರದ ಆಚೆ ದಡ ಸೇರಿದ' ಹನುಮಂತನ ಅನುಗ್ರಹ, ಅವನ ಆರಾಧಕರಾದ ಶ್ರೀಸತ್ಯಧರ್ಮರ ಅನುಗ್ರಹ, ಅವರ ಪೀಠದಲ್ಲಿ ಬಂದ ಶ್ರೀ ಸತ್ಯಪ್ರಮೋದರ ಅನುಗ್ರಹವಲ್ಲದೆ ಬೇರೆ ಅಲ್ಲ.

—ಕೆ. ಹಯವದನ ಪುರಾಣಿಕ.

॥ ಶ್ರೀಃ ॥

# ಶ್ರೀಮದ್ವಾಲ್ಮೀಕಿ ರಾಮಾಯಣಮ್

## ಸುಂದರಕಾಂಡಃ

### ಪ್ರಥಮಃ ಸರ್ಗಃ

ತತೋ ರಾವಣನೀತಾಯಾಃ ಸೀತಾಯಾಃ ಶತ್ರುಕರ್ಶನಃ ।
ಇಯೇಷ ಪದಮನ್ವೇಷ್ಟುಂ ಚಾರಣಾಚರಿತೇ ಪಥಿ ॥ ೧ ॥

ದುಷ್ಕರಂ ನಿಃಪ್ರತಿದ್ವಂದ್ವಂ ಚಿಕೀರ್ಷನ್ ಕರ್ಮ ವಾನರಃ ।
ಸಮುದಗ್ರಶಿರೋಗ್ರೀವೋ ಗವಾಂ ಪತಿರಿವಾಬಭೌ ॥ ೨ ॥

ಅಥ ವೈದೂರ್ಯವರ್ಣೇಷು ಶಾದ್ವಲೇಷು ಮಹಾಬಲಃ ।
ಧೀರಃ ಸಲಿಲಕಲ್ಪೇಷು ವಿಚಚಾರ ಯಥಾಸುಖಮ್ ॥ ೩ ॥

---

ಶ್ರೀ ಸತ್ಯಧರ್ಮತೀರ್ಥ ವಿರಚಿತಾ ಭಾವದೀಪ ಟಿಪ್ಪಣೀ

ಓಂ ಆರಾಮಧಾಮಶ್ರೀರಾಮರಾಮಾಂ ದ್ರಷ್ಟುಂ ಗತೋಽಂಬುಧೇಃ ।
ಪಾರಂ ಸ ಪಾರಯೇದೇತತ್ಕಾಂಡಕಾಂಡನಿಧಿಂ ಮಯಾ ॥

ರಾಜ್ಞಾ ಆಜ್ಞಾಂ ಸಫಲೀಕರ್ತುಂ ಸ್ವಚ್ಛಹೃದಯ ಇಚ್ಛತಿ ಸ್ಮೇತ್ಯಾಹ ತತ ಇತಿ। ಸೀತಾಯಾ ಉಕ್ತರೀತ್ಯಾ ಪ್ರತಿಕೃತೇಃ ಪದಂ ಆವಾಸಸ್ಥಾನಂ ಚಾರಣೈಃ ದೇವತಾ ಜಾತಿವಿಶೇಷೈಃ ಆಚರಿತೇ ಸಂಚರಿತೇ ಪಥಿ ಮಾರ್ಗೇ ಅನ್ವೇಷ್ಟುಂ ಇಯೇಷ ಇಚ್ಛಾಮ ಕರೋತ್ । ರಾವಣೇತ್ಯತ್ರ ವಕಾರಃ ಗಾಯತ್ರ್ಯಾ ದ್ವಾದಶಾಕ್ಷರಂ ॥ ೧ ॥

ದುಷ್ಕರಂ ಅನ್ಯೈಃ ಕರ್ತುಮಶಕ್ಯಂ ನಿಃ ಪ್ರತಿದ್ವಂದ್ವಂ ಅಸದೃಶಂ । ಶಿರಶ್ಚ ಗ್ರೀವಾ ಚ ಶಿರೋಗ್ರೀವಂ । ಸಮುದಗ್ರಂ ಉನ್ನತಂ ತದ್ ಯಸ್ಯ ಸ ತಥಾ । ಗವಾಂ ಪತಿಃ ವೃಷಭಃ ॥ ೨ ॥

ಬಾಲವಾಯು ಸಂಜ್ಞಿತ ಸ್ಥಾನವಿಶೇಷಭವೋ ಮಣಿವಿಶೇಷೋ ವೈದೂರ್ಯಮಿತ್ಯುಚ್ಯತೇ । ವಿದುರಾಞ್ ಞ್ಯಃ ಇತಿ ಞ್ಯಃ । ತತ್ಸಮವರ್ಣೇಷು ಶಾದ್ವಲೇಷು ಹರಿದ್ವರ್ಣತೃಣವಿಶಿಷ್ಟಪ್ರದೇಶೇಷು ಸಲಿಲ ಕಲ್ಪೇಷು ಶ್ಯಾಮತ್ವಾದಿನಾ ಜಲಸಮೇಷು ॥ ೩ ॥

